# ಪೊರಕೆ

( ಹದಿನಾರು ಹರಟೆಗಳು )



ಅ. ನ. ಕೃಷ್ಣರಾಯ

ಪ್ರಕಾಶಕರು

ಪ್ರಗತಿಶೀಲ ಲೇಖಕರ ಸಂಘ

ಬೆಂಗಳೂರು ನಗರ

---

ಮಾರಾಟದ ಪೂರ್ಣಾಧಿಕಾರಿಗಳು

ಕರ್ನಾಟಕ ಸಾಹಿತ್ಯ ಮಂದಿರ

ಧಾರವಾಡ

೧೯೪೬]     [ಬೆಲೆ ೧-೦-೦

# ಮುನ್ನುಡಿ

ಘನವಾದ ವಿಷಯಗಳನ್ನೆತ್ತಿಕೊಂಡು ಲಘುವಾಗಿ ಬರೆಯುವುದೂ, ಲಘುವಿಷಯಗಳನ್ನೆತ್ತಿಕೊಂಡು ಘನವಾಗಿ ಬರೆಯುವುದು ಹರಟೆಯ ಲಕ್ಷಣ. ಸಮಾಜದ, ವ್ಯಕ್ತಿಯ ಓರೆಕೋರೆಗಳನ್ನು ಹರಟೆಕಾರ ವ್ಯಂಗ್ಯಚಿತ್ರಕಾರನಂತೆ ರೂಪಿಸುತ್ತಾನೆ. ಅವನ ಮಾತಿನಲ್ಲಿ ಸತ್ಯ ತುಂಬಿರುತ್ತದೆ. ಆದರೆ ಉತ್ಪ್ರೇಕ್ಷೆ ಅವನ ಪರಮಾಯುಧ. ಹರಟೆಗಾರ 'ನಕ್ಕು ನಗಿಸುವ ನಗೆಗಾರ.' ಸಮಾಜ, ವ್ಯಕ್ತಿಗಳ ಬಗ್ಗೆ ಅವನ ನೋಟ ವಕ್ರನೋಟ, ಆದರೆ ಅದು ಅಂತಃಕರಣರಹಿತವಾಗಿರುವುದಿಲ್ಲ. ಜೀವನಝುರಿಯ ಮೇಲೇಳುವ ಸಣ್ಣ ಸಣ್ಣ ಗುಳ್ಳೆಗಳನ್ನು ಅವನು ನಗೆಸೂಜಿಯಿಂದ ಕೆಣಕುತ್ತಾನೆ. ಲೋಕ ವೃತ್ತಿಯ ಡಂಭಾಚಾರವನ್ನು ಅಪಹಾಸ್ಯಮಾಡುತ್ತಾನೆ.

ಈ ಹರಟೆಗಳನ್ನು ಬರೆಯಬೇಕೆಂದು ಬಹಳಕಾಲದಿಂದ ಗುರುತು ಹಾಕಿಟ್ಟುಕೊಂಡಿದ್ದೆ. ಅವುಗಳ ಬರವಣಿಗೆಗೆ ಕಾರಣಕರ್ತರು ನನ್ನ ಮಿತ್ರರಾದ ನಾಡಿಗೇರ ಕೃಷ್ಣರಾಯರು. ಈ ಸಂಗ್ರಹದಲ್ಲಿ ಪ್ರಕಟವಾಗಿರುವ 'ಹೊಸದು-ಹಳೆಯದು' 'ರೋಗ' 'ಶ್ರಾದ್ಧ' ಈ ಮೂರು ಹರಟೆಗಳನ್ನು ಅವರು 'ಕಥಾಂಜಲಿ'ಯಲ್ಲಿ ಪ್ರಕಟಿಸಿದರು. 'ಭಾರತದ ವಾಕ್ಚಿತ್ರಗಳು' ಹರಟೆಯನ್ನು 'ವಾಕ್ಚಿತ್ರ' ಪತ್ರಿಕೆಯ ವಿಶೇಷ ಸಂಚಿಕೆಗೆ ಬರೆದುಕೊಟ್ಟಿದ್ದೆ. 'ಆತ್ಮಹತ್ಯಾಯೋಗ' ಮನೋಹರ ಗ್ರಂಥಮಾಲೆಯ 'ಸುಳಹು-ಹೊಳಹು' ಗ್ರಂಥದಲ್ಲಿ ಪ್ರಕಟವಾಗಿತ್ತು. ಉಳಿದ ಹನ್ನೊಂದು ಹರಟೆಗಳು ಪ್ರಕಟವಾಗುತ್ತಿರುವುದು ಇದೇ ಮೊದಲು.

ಯಾರನ್ನೂ ಚುಚ್ಚಿ ನೋಯಿಸಬೇಕೆಂಬ ಉದ್ದೇಶ ನನ್ನ ಹರಟೆಗಳಲ್ಲಿಲ್ಲ. ಅಬ್ರಹಾಂ ಲಿಂಕನ್ ಹೇಳಿದಂತೆ 'Malice towards none and Love towards all' ಇವುಗಳನ್ನು ಬರೆದುದಾಗಿದೆ.

"ಅನ್ನಪೂರ್ಣ"
ವಿಶ್ವೇಶ್ವರಪುರಂ,
ಬೆಂಗಳೂರು ನಗರ
೧೫-೩-೧೯೪೭

# ಪರಿವಿಡಿ





# ಪ್ರೊ ರ ಕ



## ೧. ಹೊಸದು—ಹಳೆಯದು

ಹೊಸದು, ಹಳೆಯದರ ತಿಕ್ಕಾಟ ಬಹಳ ಕಾಲದಿಂದ ಅವ್ಯಾಹತವಾಗಿ ನಡೆದುಬರುತ್ತಿದೆ. ಜನಜೀವನದ ಪ್ರತಿಯೊಂದು ಅಂಗದಲ್ಲಿಯೂ ಇದನ್ನು ಮೆಚ್ಚಿಯೋ ಅದನ್ನು ಮೆಚ್ಚಿಯೋ ವಾದಮಾಡುವವರು ಎಲ್ಲಾ ಕಾಲಗಳಲ್ಲಿಯೂ ಇದ್ದೇ ಇರುತ್ತಾರೆ. ನಮ್ಮ ದೇಶಕ್ಕೆ ಇದನ್ನು ಅನ್ವಯಿಸಿ ನೋಡಿದರೆ ಹಳೆಯದರ ಪಕ್ಷಪಾತಿಗಳೇ ಹೇರಳ. ಹಳೆಯದೆಂದರೆ ಹೊನ್ನು ಹೊಸದೆಂದರೆ ಹಿತ್ತಾಳೆ ಅವರಿಗೆ. ಜನಜೀವನದ ಕನ್ನಡಿಯಂತಿರುವ ಗಾದೆ ಮಾತುಗಳಲ್ಲಿ ಹಳೆಯದನ್ನು ಎತ್ತಿಹಿಡಿಯುವ ನೂರಾರು ಗಾದೆಗಳು ನಮಗೆ ಸಿಕ್ಕುತ್ತವೆ. "ಹಳೆಯೆತ್ತು ಹೊರೆಯಲ್ಲಿ ಹೂಡಿ ನೋಡು" - "ಹುಣಿಸೇಮರ ಮುದಿಯಾದರೆ ಹುಳಿ ಮುದಿಯೇ?" - "ಹೊಸಲು ದಾಟುವಾಗಲೆ ಹೊಸ ಅತ್ತೆಯನ್ನು ತರಬೇಕೆಂದ ಹಾಗೆ" - "ಹೊಸ ನೀರು ಬಂದು ಹಳೇ ನೀರು ಕೊಚ್ಚಿಕೊಂಡು ಹೋಯ್ತು" - "ಹಲ್ಲು ಮೇಲಿನ ಕೆಂಪು, ಕಲ್ಲ ಮೇಲಿನ ಹಂಸೆ, ಮಲ್ಲಿಗೆಯರಳ ತನಿಗಂಪು, ಹೊಸ ಮೋಹ ನಿಲ್ಲವು ನೋಡು" - "ಹೊಸ ವೈದ್ಯನಿಗಿಂತ ಹಳೆ ರೋಗಿಯೇ ಮೇಲು." ಪ್ರಾಯಶಃ ಈ ಹಳೆಯ ವ್ಯಾಮೋಹಕ್ಕೆ ಬೆದರಿಯೇ ಬಹುಮಂದಿ ಕನ್ನಡ ಕವಿಗಳು 'ಹೊಸತೆಂದು - ವಿನೂತನ ಕವಿತೆಯೆಂದು ಜರಿಯಬೇಡಿ' ಎಂದು ಓದುಗರನ್ನು ಅಂಗಲಾಚಿ ಬೇಡಿಕೊಂಡಿದ್ದಾರೆ. ಕೆಲವು ಕವಿಗಳು ತಾವು ಬರೆದ ಕೃತಿಗಳು ಸಮಕಾಲೀನದವೆಂದು ಗೊತ್ತಾದರೆ ಪಂಡಿತರು ಮನ್ನಣೆ ಕೊಡುವುದಿಲ್ಲದೆಂದು ಹೆದರಿ ಅವು ಪ್ರಾಚೀನ ಕಾವ್ಯ

ಗಳೆಂದು ಸಾಹಿತ್ಯ ಪ್ರಪಂಚದಲ್ಲಿ ಕೋಲಾಹಲವುಂಟು ಮಾಡಿದ್ದಾರೆ. ಮುದ್ದಣ ಕವಿಯ ಕಾವ್ಯಗಳು ಪ್ರಾಚೀನ ಕವಯಿತ್ರಿ ಮಹಾಲಕ್ಷ್ಮಿಯ ಕೃತಿಗಳೆಂದು ಪಂಡಿತರ ಮನ್ನಣೆಯನ್ನು ದೊರಕಿಸಿಕೊಂಡವು. ಕವಿ ರವೀಂದ್ರರು ತಮ್ಮ ಕೆಲವು ಕವಿತೆಗಳನ್ನು ಪ್ರಾಚೀನ ಕವಿ ಭಾನುಸಿಂಹನ ಕೃತಿಗಳೆಂದು ಪ್ರಕಟಿಸಿದರು. ಅವುಗಳ ಮೇಲೆ ಜರ್ಮನಿಯಲ್ಲಿದ್ದ ನಿಶೀಕಾಂತ ಚಟರ್ಜಿ ಎಂಬ ವಂಗ ವಿದ್ವಾಂಸರು ವಿಮರ್ಶೆ ಬರೆದು ಡಾಕ್ಟರೇಟ್ ದೊರಕಿಸಿಕೊಂಡರು.

ಇಂದಿಗೂ ಈ ಮನೋಭಾವ ಹೋಗಿಲ್ಲ. ಸಾಹಿತ್ಯವನ್ನಾಗಲಿ ಕಲೆಯನ್ನಾಗಲಿ ಅವುಗಳ ಯೋಗ್ಯತೆಯ ಮಾನದಂಡದಿಂದಳೆಯುವುದರ ಬದಲು ಹೊಸತು, ಹಳೆಯದೆಂಬ ದೃಷ್ಟಿಯಿಂದ ಅಳೆಯುತ್ತಾರೆ. ಶಿಲ್ಪ ಹೊಸದೆಂದರೆ ನಾಲ್ಕು ರೂಪಾಯಿ ಸಿಕ್ಕುವುದಿಲ್ಲ. ಅದನ್ನು ಆರು ತಿಂಗಳು ಮಣ್ಣಿನಲ್ಲಿ ಹೂತಿಟ್ಟಿದ್ದು, ಪುನರ್ಜನ್ಮವನ್ನಿತ್ತು ಪಲ್ಲವ, ಚೋಳ ಶಿಲ್ಪವೆಂದು ಮಾರಿದರೆ ನಾಲ್ಕು ಸಾವಿರ ರೂಪಾಯಿ ಬರುತ್ತದೆ. ರೆಂಬ್ರ್ಯಾಂಟ್, ರೂಬನ್, ಗಾಂಗ್ವಿನ್, ಸೆಜಾನ್ ಇವರ ಚಿತ್ರಗಳನ್ನು ಕೇಳುವವರಿರಲಿಲ್ಲ. ಅವರು ಅಂದಿನ ಕೂಳಿಗೆ ಕೊರಗಬೇಕಾಗಿತ್ತು. ಇಂದು ಅವು ಹಳೆಯವೆಂದು ಶ್ರೀಮಂತರು ಹಿಡಿ ಹಿಡಿ ಹೊನ್ನು ಕೊಟ್ಟು ಅವುಗಳನ್ನು ಸಂಗ್ರಹಿಸುತ್ತಾರೆ.

ನಮ್ಮಲ್ಲಿ ಹಳೆಯದಕ್ಕೆ ಇರುವ ಪುರಸ್ಕಾರ ಅಷ್ಟಿಷ್ಟಲ್ಲ. ತೊಲೆಗಳು, ಜಂತುಗಳು ಗೆದ್ದಲು ತಿಂದು ತಲೆಯ ಮೇಲೆ ಬೀಳುವಂತಿದ್ದರೂ ಹಿರಿಯರ ಸೃಷ್ಟಿಯೆಂದು ಅಂತಹ ಮನೆಗಳಿಗೆ ಅಪಾರ ಗೌರವ. ವಿದ್ಯಾಪರಿಣತ ಮತಿಗಳು ಹಳೆಯ ಗ್ರೀಕ್, ಇಂಗ್ಲಿಷ್ ಕವಿಗಳನ್ನು ಪುನರುಜ್ಜೀವನಗೊಳಿಸಿ ನಮ್ಮ ಜನದ ನೀರಿಳಿಯದ ಗಂಟಲಿನಲ್ಲಿ ಈ ಕಡುಬನ್ನು ತುರುಕುತ್ತಾರೆ. ಸಾಹಿತ್ಯ, ಸಾಂಸ್ಕೃತಿಕ ಸಂಸ್ಥೆಗಳ ಅಧ್ಯಕ್ಷಸ್ಥಾನ ವಯೋವೃದ್ಧರಿಗೆ ಮೀಸಲು. ಮರ್ಯಾದೆ ಅವರ ವಿದ್ಯೆ, ಸೇವೆಗಳಿಲ್ಲ - ವಯಸ್ಸಿಗೆ! ಈ ದೃಷ್ಟಿಗೆ ವಿರೋಧವಾಗಿ ಹೊಸಬರು, ಹಳೆಯ ಹೆಂಡ ರುಚಿಯೆಂದರೆ ಹಳೆಯ ಟೀ ರುಚಿಯೇ? - ಹಳೆಯ ಅಕ್ಕಿ ಒಳ್ಳೆಯದೆಂದರೆ ಹಳೆಯ ರಾಗಿ ಒಳ್ಳೆಯದೆ? - ಎಂದು ಹೇಳುತ್ತಾರೆ. ಯುರೋಪಿನಲ್ಲಿ ಹಳೆಯ ಜನಕ್ಕೆ

ಪುರಸ್ಕಾರವಿಲ್ಲ. ಟ್ರಾಂ, ಬಸ್, ರೈಲುಗಳಲ್ಲಿ ಹಳಬರಿಗೆ ಜಾಗ ಸಿಕ್ಕುವುದು ದುರ್ಲಭ. ಅದೇ ತರುಣಿಯೊಬ್ಬಳು ಬಾಯ್ದೆಳೆಂದರೆ ಇಡೀ ಬಂಡಿಯ ಜನ ಅವಳ ಸೇವೆಗೆ ಸಿದ್ಧರಾಗುತ್ತಾರೆ. ಪ್ರಾಯಶಃ ಈ ಭಾವನೆ ನಮ್ಮ ಜನರಲ್ಲಿಯೂ ಬರುತ್ತಿದೆಯೆಂದು ಕಾಣುತ್ತಿದೆ. ಅದಕ್ಕೇ ಮುದುಕರು ಮೀಸೆಗೆ ಕಪ್ಪು ಹಚ್ಚಿಕೊಂಡು ಹೊಸ ಮದುವೆಗೆ ಸನ್ನದ್ಧರಾಗುವುದು. ಅದಕ್ಕೇ ದುರ್ಗಾಖೋಟೆ, ಜದ್ದನ್‌ಬಾಯ್, ಸಬಿತಾದೇವಿ, ಸುಲೋಚನಾ ಮೊದಲಾದ ಸಿನೀಮಾ ನಟಿಯರು ಪ್ರಾಯದ ಪ್ರಣಯ ಕತೆಗಳನ್ನೇ ಆಯ್ದುಕೊಂಡು ಅಭಿನಯಿಸುವುದು.

ನಮ್ಮ ಜನಕ್ಕೆ ಹೊಸದು ಬೇಡವೆಂದಲ್ಲ; ಆದರೆ ಇಂಗ್ಲಿಷ್ ಗಾದೆ ಹೇಳಿದ ಹಾಗೆ 'ಹೊಸ ಮದ್ಯವನ್ನು ಹಳೆಯ ಶೀಷೆಗಳಲ್ಲಿ ತುಂಬಿ' ಕೊಡಬೇಕು. ಗಾಂಧೀಜಿಯವರು ಚರಕಾ ಯಂತ್ರವನ್ನು ಕಂಡುಹಿಡಿದ ರೆಂದರೆ ನಮ್ಮ ಜನಕ್ಕೆ ಕೋಪ. ಅದು ಶ್ರೀಕೃಷ್ಣನ ಸುದರ್ಶನ ಚಕ್ರದ ಅಪರಾವತಾರವೆಂದು ಅವರಿಗೆ ಹೇಳಬೇಕು. ಸಾಮ್ಯವಾದ ಕಾರ್ಲ್ ಮಾರ್ಕ್ಸ್‌ನಿಂದ ಆರಂಭವಾಯಿತೆಂದರೆ ಅವರಿಗೆ ತಿರಸ್ಕಾರ, ಅದು ರಾಮಾಯಣದಲ್ಲಿ ಕಿಷ್ಕಿಂಧಾಕಾಂಡದಿಂದ ಬಂತು; ಹನುಮಂತ ಹಿಂದೂಸ್ಥಾನದ ಹಿರಿಯ ಸಾಮ್ಯವಾದಿ ಎಂದು ಹೇಳಿದರೆ ಆಪ್ಯಾಯಮಾನ. ವಿಜ್ಞಾನ ಯುಗದ ಶೋಧನೆಗಳು ಕ್ಯೂರಿ, ಎಡಿಸನ್, ನೋಬೆಲ್, ರಾಂಟಿಂಗನ್ ಇವರಿಂದ ಬಂತೆಂದರೆ ನಮ್ಮ ಜನಗಳಿಗೆ ಸಹ್ಯವಿಲ್ಲ. ಅವು ಸಾಮವೇದ ದಿಂದ ಬಂದವೆಂದು ಹೇಳಬೇಕು.

ಹಳೆಯದನ್ನು ನಾವು ಹಳಿಯುವುದಕ್ಕೆ ಹೊರಟಿಲ್ಲ. ನಾವೂ ಹಳೆಯದರ ಆರಾಧಕರೇ. ಈಗ ಬರುತ್ತಿರುವ ಹೊಸ ಬ್ಲೇಡುಗಳಿಗಿಂತ ಗಾಜಿನ ಗ್ಲಾಸಿನಲ್ಲಿ ಉಜ್ಜಿಸಿಕೊಳ್ಳುವ ಹಳೆಯ 'ಸೆವೆನ್ ಓ ಕ್ಲಾಕ್' 'ಕಾಫಮನ್' ಬ್ಲೇಡುಗಳು ನಮಗೆ ಬಹಳ ಪ್ರಿಯ. ಸರ್ವಜ್ಞ ಕವಿ ಒಂದು ಮುತ್ತಿನಂತಹ ಮಾತು ಹೇಳಿದ್ದಾನೆ. 'ಚುಚ್ಚುವಾ ಕೆರಕಿಂತ ಕಚ್ಚುವಾ ಶುನಿ ಲೇಸು' ಎಂದು. ಇದು ಹಳೆಯ ಪಾದರಕ್ಷೆಗಳಿಗೆ ಅನ್ವಯಿಸುವುದಿಲ್ಲ. ಹಳೆಯ ಕೆರವನ್ನು ಹಾಕಿಕೊಂಡು ಹೋದರೆ ಜೇಬಿನಲ್ಲಿ ಒಂದು ಕಲ್ಲು, ಹತ್ತು ತಂತೀ ಮಳೆಯನ್ನಿಟ್ಟುಕೊಳ್ಳಬೇಕಾದುದು ಅವಶ್ಯಕ.

ಪಂಡಿತನಾಗಲಿ, ಪಾಮರನಾಗಲಿ, ಶ್ರೀಮಂತನಾಗಲಿ, ದರಿದ್ರನಾಗಲಿ ಕೆರ ಕಿತ್ತುಹೋದೆಡೆಯನ್ನು ಲಕ್ಷಿಸದೆ ಅದರ ರಿಪೇರಿಗೆ ಕೈ ಹಚ್ಚಬೇಕಾಗುತ್ತದೆ. ಆದರೆ ಅದು ಬೇಕು, ಹೊಸ ಕೆರದ ಸಹವಾಸ ಬೇಡ. ಕೆರ ಮತ್ತು ಹಳೆಯ ಅಂಗಿ ನಾವು ಹಾಕಿ ಹಾಕಿ ಅವು ತಮ್ಮ ಸ್ವರೂಪವನ್ನು ನಿಷ್ಕಾಮ ಬುದ್ಧಿಯಿಂದ ಕಳೆದುಕೊಂಡು, ಅನಾಸಕ್ತಿ ಯೋಗವನ್ನು ಆಚರಿಸಿ ನಮ್ಮ ದೇಹದ ಆಕಾರ ಪ್ರಮಾಣಗಳಿಗೆ ಹೊಂದಿಕೊಳ್ಳುತ್ತವೆ. ಈ ದೊಡ್ಡ ಬುದ್ಧಿ ಹೊಸ ಪದಾರ್ಥಗಳಿಗೆಲ್ಲಿಂದ ಬರಬೇಕು ?

ಹಳೆಯ ಶಾನುಭೋಗನನ್ನು ನೋಡಿ. ಇಡೀ ಸರ್ಕಾರದ ಜೀವ ಜೀವಾಳವೆಲ್ಲಾ ಅವನ ಕಯ್ಯಲ್ಲೇ. ಅವನ ಖಾತೆ, ಖಿರ್ದಿ, ಸಾದಿಲ್ವಾರು ಯಾವ ಬಿ. ಎ., ಎಂ. ಎ. ಮಾಡಿದ ರೆವಿನ್ಯೂ ಇನ್ಸ್‌ಪೆಕ್ಟರ್, ಅಮಲ್ದಾರ್, ಸಬ್ ಡಿವಿಜನ್ ಆಫೀಸರರಿಗೂ ಬಗೆಹರಿಯುವುದಿಲ್ಲ. ಅವನು ಗಣಿತವನ್ನು 'ಕುಣಿಸು'ವವನು ಮಾತ್ರವೇ ಅಲ್ಲ. ಹಳ್ಳಿಯ ಜೀವನವೇ ಅವನ ಇಚ್ಛಾ ಗಾಮಿ, ಅವನು ಹೇಳಿದ ದಿವಸವೇ ಜಮಾಬಂದಿ, ಅವನು ನಮ್ಮ ಕಣ್ಣೆದುರಿಗೇ ಒಂದು ಚಿಟಿಕೆ ಮಣ್ಣು ಎತ್ತಿಕೊಟ್ಟರೂ ಅದೇ ಸಿದ್ಧೌಷಧ. ಈ ಛಾತಿ ಹೊಸಬರಿಗೆ ಬರಬೇಕೆಂದರೆ ಹೇಗೆ ಸಾಧ್ಯ.

ಹಳೆಯ ಜನಗಳ ಇನ್ನೊಂದು ಹಿರಿಯ ಗುಣವನ್ನು ನಾವು ಮರೆಯು ವುದಕ್ಕೆ ಶಕ್ಯವಿಲ್ಲ. ಈಗಿನವರು ಕಾಫಿ, ಟೀ ಜನ, ಇವರು ಸಂಪಾದಿ ಸಿದ್ದೆಲ್ಲಾ ಡಿಸ್ಪೆನ್ಸರಿಯ ಪಾಲು. ಹಿಂದಿನವರು ಕಲ್ಲು ತಿಂದು ಕಲ್ಲು ಅರಗಿಸಿಕೊಳ್ಳುತ್ತಾರೆ. ಅವರಿಗೆ ಅಜೀರ್ಣವೆನ್ನುವ ಶಬ್ದವೇ ಗೊತ್ತಿಲ್ಲ. ನಮಗೆ ಅಜೀರ್ಣವೇ ಮನೆದೇವರು. ತಿಂದು ತಿಂದು ಗೂಳಿಗಳ ಹಾಗೆ ಅವರು ಬೆಳೆಯುತ್ತಾರೆ. ತಿನ್ನದೆ ನಾವು ಅಜೀರ್ಣಕ್ಕೆ ಔಷಧಿ ಹುಡುಕಿ ಕೊಂಡು ಹೋಗುತ್ತೇವೆ.

ಹಳೆಯದಕ್ಕೂ ಹೊಸದಕ್ಕೂ ಕೆಲವು ಕಡೆ ಮೇಳವಾಗುತ್ತದೆ. ಎರಡೂ ಜನಾಂಗಕ್ಕೆ ಸೇರಿದವರು ಯಂತ್ರದ ಕೀಲುಗಳೇ ಆಗಿದ್ದಾರೆ. ಹಳಬರೆದ್ದರೆ ಸ್ನಾನ, ಹೂ ಬಿಡಿಸುವುದು, ದೇವರ ಪೂಜೆ, ಮಾಧ್ಯಾಹ್ನಿಕ ಇತ್ಯಾದಿ ಕ್ರಮಿಕ ಕರ್ಮಗಳಿಗೆ ಬದ್ಧರು ; ಹೊಸಬರೆದ್ದರೆ ಟೂತ್‌ಪೇಸ್ಟ್, ಸೆಲ್ಫ್-ಷೇವ್, ಕಾಫಿ, ಸಿಗರೇಟುಗಳ ವಿಕ್ರೀತ ದಾಸರು. ಹಳಬರಿಗೆ

ಸಂಧ್ಯಾವಂದನೆ ಮಾಡದಿದ್ದರೆ ತಲೆಬೇಸರ, ಹೊಸಬರಿಗೆ ಸಿನೀಮಾಕ್ಕೆ ಹೋಗದಿದ್ದರೆ ಪ್ರಾಣವೇ ಹೋಗುತ್ತದೆ. ಯಾವನಾದರೂ 'ಸ್ವಾಮಿ' ಬಂದನೆಂದರೆ ಹಳಬರಿಗೆ ರೆಕ್ಕೆ ಬಂದಂತಾಗುತ್ತದೆ. ಯಾವಳಾದರೂ ಸಿನೀಮಾ ನಟಿ ಬಂದಳೆಂದರೆ ಹೊಸಬರಿಗೆ ರೆಕ್ಕೆ ಪುಕ್ಕಗಳೆರಡೂ ಬಲಿಯುತ್ತವೆ. ಅದಕ್ಕೇ ಗಾಂಧಿಯವರಂತಹ ಬುದ್ಧಿವಂತರು ಹಿಂದೂ ಮುಸಲ್ಮಾನ ಐಕಮತ್ಯಕ್ಕೂ, 'ಅಹಿಂಸಾಪರಮೋಧರ್ಮ'ಕ್ಕೂ ಗಂಟುಹಾಕಿರುವುದು,

ಹಳಬರು, ಹೊಸಬರು ಇಬ್ಬರೂ ಸಮನ್ವಯದ ಕಡೆಗೆ ದೃಷ್ಟಿಯಿಟ್ಟಿರುವುದು ಭಾರತವರ್ಷದ ಭಾಗ್ಯೋದಯ ಚಿನ್ಹವೆಂದು ಹೇಳಬಹುದು. ಧೋತ್ರ, ನಿಲುವಂಗಿ, ರುಮಾಲು ಹಾಕಿದ ದೇಹದ ಕೆಳಗೆ ಬೂಟ್ಸು, ಕಾಲುಚೀಲ ಬರುತ್ತಿದೆ; ದಟ್ಟಿ, ಓಪನ್ ಕಾಲರ್ ಕೋಟು, ಹಣೆಗೆ ಅಕ್ಷತೆ (ನಾಮ, ಅಂಗಾರ ಇತ್ಯಾದಿ) ಜತೆಗೆ ಕೆಂಪು ಟೈ ಬರುತ್ತಿದೆ; ಸುರವಾಲ್, ಷರ್‍ವಾನಿ, ತಲೆಯ ಮೇಲೆ ಬಿಳಿಯ ಹ್ಯಾಟು ಬರುತ್ತಿದೆ. ದೇಶಭಕ್ತ ಬಿ. ಜಿ. ಹಾರ್ನಿಮನ್ ಅಂತಹವರು ಖಾದಿ ಧೋತ್ರ, ಜುಬ್ಬ ಧರಿಸಿ ತಲೆಯ ಮೇಲೆ ಬಿಳಿಯ ಹ್ಯಾಟು ಹಾಕಿಕೊಂಡು ದೇಶಕ್ಕೆ ಮೇಲ್ಪಂಕ್ತಿ ತೋರಿಸಿಲ್ಲವೇ? ಈ ವಿಷಯದಲ್ಲಿ ನಮ್ಮ ಹೆಣ್ಣುಮಕ್ಕಳೂ ಹಿಂದೆಬಿದ್ದಿಲ್ಲ. ಮುದುಕಿಯರು ಪೌಡರ್, ಕಿವಿಗಳಿಗೆ ತೂಗುಯ್ಯಾಲೆಗಳನ್ನು (ಲೋಲಾಕುಗಳು) ಧರಿಸುತ್ತಿದ್ದಾರೆ; ತರುಣಿಯರು ಕಡಗ, ಬುಗುಡಿ, ಒಂಕಿಗಳನ್ನು ಹಾಕಲಾರಂಭಿಸಿದ್ದಾರೆ. ಮುದುಕಿಯರಿಗೆ ಬೇಕಾಗಿದ್ದ ಕುತ್ತಾಲ, ಕೊಯಿಮತ್ತೂರು, ಇಳಕಲ್ ಸೀರೆ ತರುಣಿಯರಿಗೆ 'ಲೇಟೆಸ್ಟ್ ಫ್ಯಾಷನ್!' ತರುಣಿಯರಿಗೆ ಪ್ರಿಯವಾಗಿದ್ದ ಇಂಡಿಯನ್ ಸಿಲ್ಕ್, ಜಾರ್ಜೆಟ್, ಸೊಳ್ಳೆಪರದೆ ಸೀರೆ ಮುದುಕಿಯರಿಗೆ ಪ್ರಾಣಪದಕ. ತರುಣಿಯರು ರಾಮಾಯಣ ಭಾರತಗಳನ್ನು ಓದಲಾರಂಭಿಸಿದ್ದರೆ, ಮುದುಕಿಯರು ಪೆಂಟ್ಯಾಗ್ಯುಲರ್, ಕ್ವಾಡ್ರ್ಯಾಂಗುಲರ್ ಕ್ರಿಕೆಟ್ ಮ್ಯಾಚುಗಳಿಗೆ ಕಿಕ್ಕಿರಿದು ತುಂಬುತ್ತಿದ್ದಾರೆ. ಕಾಲದರ್ಶಕನಾದ ಕವಿ ಹೇಳಿಲ್ಲವೇ 'ಇವಳ ಉಡಿಗೆ ಅವಳಿಗಿಟ್ಟು, ಅವಳ ತೊಡಿಗೆ ಇವಳಿಗಿಟ್ಟು ನೋಡಬಯಸಿದೆ-ಹಾಡಬಯಸಿದೆ' ಆ ಬಯಕೆ ಇಂದು ಪೂರ್ಣ ಫಲಿಸುತ್ತಿರುವುದನ್ನು ಕಂಡು ಕವಿಹೃದಯ ಎಷ್ಟು ಹಿಗ್ಗಿರಬಹುದೋ?

———

# ೨. ರೋಗ

ವಯಸ್ಸಾಗುತ್ತ ಆಗುತ್ತ, ಜೀವನಾನುಭವ ಬೆಳೆಯುತ್ತ, ಮಾನವ ಅಂತಃಕರಣದ ಚೆಲುವೆಯನ್ನು ಕೆದಕುತ್ತ ಆಶಾವಾದಿ ಕ್ರಮಕ್ರಮೇಣ ನಿರಾಶಾವಾದಿಯಾಗುತ್ತ ಬರುತ್ತಾನೆ. ನಕ್ಕುನಲಿಯುವ ಜಗತ್ತು ಅವನಿಗೆ ಅಳುವಿನ ಮಡುವಾಗುತ್ತ ಬರುತ್ತದೆ. ಯಾರಲ್ಲಿ ತಾನು ಅಪಾರ ಪ್ರೇಮ, ಅವ್ಯಾಜ ಗೌರವಗಳನ್ನಿಟ್ಟುಕೊಂಡಿದ್ದಾನೋ ಅವರ ಕೀಳು ಗುಣವನ್ನು ಕಂಡು ಮಾನವನ ಸುಗುಣದಲ್ಲಿ ನಂಬಿಕೆಯನ್ನು ಕಳೆದುಕೊಳ್ಳುತ್ತಾ ಬರುತ್ತಾನೆ. ಲೋಕವೆಲ್ಲಾ ಶೃತಿಬದ್ಧವಾದ ಒಂದು ಸುಂದರ ಗೀತೆಯೆಂದು ನಂಬಿದ್ದ ಅವನ ಮನಸ್ಸು, ಅದು ಅಪಶೃತಿಯ ಮೇಳವೆಂಬ ಕಲ್ಪನೆಗೆ ಎಡೆ ಕೊಡುತ್ತದೆ. ಡಯೋಜೀನೀಸ್ ಅಲೆಕ್ಸಾಂಡರನಿಗೆ ಹೇಳಿದಂತೆ "ನನಗೇನೂ ಬೇಕಾಗಿಲ್ಲ. ನನ್ನ ಮೇಲೆ ಬೀಳುತ್ತಿರುವ ಬಿಸಿಲಿಗೆ ಅಡ್ಡ ನಿಂತು ನನ್ನನ್ನು ಹಿಂಸಿಸಬೇಡ" ಎಂದು ಅವನು ಲೋಕಕ್ಕೆ ಹೇಳ ತೊಡಗುತ್ತಾನೆ. ಮನುಷ್ಯನ ಮುಖವನ್ನು ಕಂಡರೆ ಕೆಂಡದಂತೆ ಕೆರಳು ತ್ತಾನೆ. ಮನುಷ್ಯನಿಗಿಂತಲೂ ಕ್ರೂರವಾದ ಪಶು ಜಗತ್ತಿನಲ್ಲಿ ಬೇರೊಂದಿಲ್ಲ ವೆಂಬ ಭಾವನೆ ಅವನಲ್ಲಿ ಬೇರೂರುತ್ತದೆ.

ಇಂತಹ ಮನುಷ್ಯ ಬದುಕಿದ್ದರೂ ಸತ್ತಂತೆಯೇ! ಅವನಿಗೆ ದೇವ ಲೋಕದ ಸುಧೆಯನ್ನು ತಂದು ಕುಡಿಸಿದರೂ ಸಾರ್ಥಕವಾಗುವುದಿಲ್ಲ. ಅಮೃತ ಕೂಡ ಅವನ ವಿಚಾರವಿಜ್ಞಾನಶಾಲೆಯಲ್ಲಿ ವಿಷವಾಗುತ್ತದೆ. ಅದರ ದಳ್ಳುರಿ ಲೋಕವನ್ನೇ ಸುಡುತ್ತದೆ. ಹತ್ತಾರು ನಿರಂಕುಶ ನಾಯ

ಕರು ಮಾಡಲಾಗದ ವಿಧ್ವಂಸನ ಕಾರ್ಯವನ್ನು ಈ ಒಬ್ಬ ನಿರುಪದ್ರವಿ ಪ್ರಾಣಿ ತನ್ನ ವಿಗಡ ವಿಚಾರದಿಂದ ಮಾಡುತ್ತಾನೆ.

ಲೋಕದಲ್ಲಿ ವಿಚಾರಕ್ಕೆ ಬೆಲೆಯಿಲ್ಲ. ವಿಚಾರಶೀಲರ ಸುಪ್ತ ಚೈತನ್ಯ ಎಷ್ಟು ದೊಡ್ಡದೆಂದು ಅಳೆಯುವ ಯೋಗ್ಯತೆಯನ್ನು ವರ್ತಕವೃತ್ತಿಯನ್ನವಲಂಬಿಸಿರುವ ಜಗತ್ತು ನೀಗಿಕೊಂಡಿದೆ. ಕಾರ್ಲ್ ಮಾರ್ಕ್ಸ ಸತ್ತನೆಂದರೆ ಅವನ ವಿಚಾರವೂ ಅವನೊಂದಿಗೇ ಸಾಯುತ್ತದೆಯೇ? ಐನ್‌ಸ್ಟೀನನ್ನು ಜರ್ಮನಿಯಿಂದ ಹೊಡೆದೋಡಿಸಿದರೆ ಅವನ ಸಂಶೋಧನೆಗಳಿಗೂ ಬಹಿಷ್ಕಾರ ಹಾಕಿದಂತಾಗುತ್ತದೆಯೇ? ಗಾಂಧಿಜಿಯನ್ನು ಸೆರೆಮನೆಯಲ್ಲಿ ಹಾಕಿದರೆ ಅವರ ವಿಚಾರಗಳಿಗೆ ಬಂದೀವಾಸ ಪ್ರಾಪ್ತವಾಗುತ್ತದೆಯೇ? ಎಂಬ ತಿಳಿವು ಮದೋನ್ಮತ್ತ ಜಗತ್ತಿಗೆ ಹೊಳೆಯುವುದಿಲ್ಲ. ವ್ಯಕ್ತಿ ಎಂತಹ ಕರಾಳ ಸ್ವರೂಪಧಾರಣೆಮಾಡಿದರೂ ಚಿಂತೆಯಿಲ್ಲ. ಅವನಿಗೆ ಅಂಜಬೇಕಾದುದಿಲ್ಲ. ಆದರೆ ಎಲ್ಲಿಯೋ ಮೂಲೆಯಲ್ಲಿ ಕುಳಿತು ಕೆಲಸಕ್ಕೆ ಬಾರದ ಕಗ್ಗಳೆನಿಸಿಕೊಂಡ ಗ್ರಂಥಗಳನ್ನು ಬರೆದ ವ್ಯಾಕ್ನರ್, ನೀಷೆಯವರ ವಿಚಾರಗಳಿಗೆ ಲೋಕ ಅಂಜಬೇಕಾಗುತ್ತದೆ, ಮಣಿಯಬೇಕಾಗುತ್ತದೆ.

ನಿರಾಶಾವಾದವನ್ನು ಆತ್ಮಧರ್ಮವನ್ನಾಗಿ ಸ್ವೀಕರಿಸುವ ಪ್ರಾಣಿ ಅಷ್ಟೇ ಭಯಂಕರನಾಗಿದ್ದಾನೆ. ಅವನ ವಿಚಾರಲಹರಿಯಿಂದ ಏಳುವ ತರಂಗಗಳು ಜಗತ್ತಿನ ಕ್ರಾಂತಿಗೆ ಹೇತು.

ಸಮಾಜ, ಸರ್ಕಾರದ ಮೊದಲನೆಯ ಕೆಲಸವೆಂದರೆ ಅಂತಹ ವ್ಯಕ್ತಿಗಳನ್ನು ಆಶಾವಾದದ ಕಡೆಗೆ ತಿರುಗಿಸುವುದು. ಇದಕ್ಕೆ ಭಗವಂತನು ಸಹಾಯ - ಸಂಚುಗಾರನಾಗಬೇಕು.

ಅಂತಹ ವ್ಯಕ್ತಿ ಕಾಹಿಲೆ ಬೀಳಬೇಕು. ಅವನನ್ನು ಆಸ್ಪತ್ರೆಯ ಸ್ಪೆಷಲ್ ವಾರ್ಡ್‌ನಲ್ಲಿಡಬೇಕು. ಹತ್ತು ದಿವಸ ಉತ್ತಮ ಸೇವೆ ಶುಶ್ರೂಷೆ ಯಾಯಿತೆಂದರೆ ಅವನ ವಿಚಾರ ಕ್ರಾಂತಿಖಡ್ಗಕ್ಕೆ ಸಿಲುಕಿ ಪರಿವರ್ತನ ಹೊಂದುತ್ತದೆ. ಮೇಲಿಂದ ಮೇಲೆ ಬಂದು ನೋಡುವ ಗೆಳೆಯರು ಬಂಧುಗಳ ಬಳಗ - ರೋಗಿಯ ಆರೋಗ್ಯದ ಬಗ್ಗೆ ಅವರು ತೋರಿಸುವ ಅನುಕಂಪ, ಕಳಕಳಿ - ರೋಗಿ ಬೇಗ ಗುಣಮುಖವಾಗಿ ನಿರೋಗಿಯಾಗಲೆಂದು ಬಯಸಿ ಅವರು ಆಗಿಂದಾಗ್ಗೆ ತಂದುಕೊಡುವ ಹೂವು, ಹಣ್ಣುಗಳು.

ಇವುಗಳ ವಾತಾವರಣದಲ್ಲಿ ಅವನ ವಜ್ರಹೃದಯ ಕುಸುಮದಂತೆ ಕೋಮಲ ವಾಗುತ್ತದೆ. ಜಗತ್ತಿನಲ್ಲಿ ಎಂತಹ ದಯೆ, ಕರುಣೆ, ಸ್ನೇಹ, ಅನುಕಂಪ ಮೂಡಿದೆಯೆಂಬ ಭಾವನೆ ಬಂದು ಕವಡಿದ ಮನಸ್ಸು ತಿಳಿಯಾಗುತ್ತದೆ.

ರೋಗವನ್ನು ನಿರ್ಮೂಲವಮಾಡಬೇಕೆಂದು ಹಟವಾದವನ್ನು ಮಾಡು ವವರಿಗೆ ಈ ವಾದ ಕೊಂಚ ವಿಪರೀತವಾಗಿ ಕಾಣಬಹುದು. ಜಗತ್ತಿನಲ್ಲಿ ಆರೋಗ್ಯಕ್ಕೆ ಯಾವ ಸ್ಥಾನವಿದೆ ಅಷ್ಟೇ, ಅದಕ್ಕೂ ಮಹತ್ವದ ಸ್ಥಾನ ರೋಗಕ್ಕೂ ಇದೆಯೆಂದು ಅವರಿಗೆ ಇನ್ನೂ ಅರಿವಾಗಿಲ್ಲ. ವ್ಯಕ್ತಿ, ಸಮಾಜ ಗಳ ನೈಸರ್ಗಿಕ ಬೆಳವಣಿಗೆಗೆ ನಿರೋಗದಂತೆ ರೋಗವೂ ಅತ್ಯವಶ್ಯಕವಾದ ವಸ್ತುವೆಂಬುದನ್ನು ಅವರು ಗ್ರಹಿಸಬೇಕು. ಹಗಲಿರುಳು ಗಾಣದೆತ್ತಿನಂತೆ ದುಡಿಯುವ ಮನುಷ್ಯನಿಗೆ ವಿಶ್ರಾಂತಿ ದೊರೆಯುವುದು ರೋಗಗ್ರಸ್ತ ನಾದಾಗಲೇ ! ಅವನ ಚೇತನಗಳು ಜಾಗೃತವಾಗಿ ಒಮ್ಮುಖವಾಗಿ ಹರಿಯು ವುದು ಆವಾಗಲೇ. ಉತ್ತಮ ಗ್ರಂಥಪಠನ, ಘನವಿಷಯಗಳ ಚಿಂತನೆ, ಆಧ್ಯಾತ್ಮಿಕ ಪ್ರವೃತ್ತಿಗಳು ಮನುಷ್ಯನಲ್ಲಿ ಜನಿಸುವುದು ಅವನು ರೋಗಗ್ರಸ್ತ ನಾದಾಗಲೇ ! ನೀಷೆ ಯಾವಜ್ಜೀವವೂ ರೋಗಗ್ರಸ್ತನಾಗಿಲ್ಲದಿದ್ದರೆ Thus spake Zarathushtra ದಂತಹ ಉಜ್ವಲ ಗ್ರಂಥವನ್ನು ಬರೆಯುತ್ತಿದ್ದ ನೆಂಬುದು ಸಂದೇಹಕರವಾದ ವಿಷಯ. ಚಾರ್ಲ್ಸ್ ಲ್ಯಾಂಬನ ಸುಂದರ ನ್ಯಾಸಗಳು ಹುಟ್ಟಿದ್ದು ರೋಗಗ್ರಸ್ತಳಾದ ಅವನ ಸೋದರಿಯ ವಿಹಾರಾರ್ಥ ವಾಗಿ ! ಶರತ್ ಬಾಬುಗಳು ಯಾವಜ್ಜೀವವೂ ರೋಗಗ್ರಸ್ತರಾಗಿಲ್ಲದಿದ್ದರೆ 'ಚರಿತ್ರಹೀನ, ಶ್ರೀಕಾಂತ, ದೇವದಾಸ್' ಮೊದಲಾದ ಅನುಪಮ ಕಾದಂಬರಿಗಳನ್ನು ಪ್ರಾಯಶಃ ಬರೆಯುತ್ತಿರಲಿಲ್ಲ.

ರೋಗದ ನಿಧಾನ ಮಾಡುವ ಪಂಡಿತರು ಅದರ ಮೂಲಕಾರಣ ಆಹಾರದ ಲೋಪದೋಷವೆಂದು ಭಾವಿಸುತ್ತಾರೆ. ಅಕ್ಕಳ್ಳು ತಿಂದು ಅಜೀರ್ಣಕ್ಕೆ ಸಿಕ್ಕಿ ಬಾಧೆಪಡುತ್ತಿರುವ ನಾವು ಇದನ್ನು ಸತ್ಯವೆಂದು ನಂಬು ವುದಕ್ಕೂ ಸಿದ್ಧರಾಗಿದ್ದೇವೆ. ಸರ್ವಜ್ಞನಾದ ಸರ್ವಜ್ಞ ಕವಿ "ರಾಗಿಯನು ತಿಂಬವನು ನಿರೋಗಿಯೆಂದೆನಿಸುವನು" ಎಂದು ಹೇಳಿದ್ದಾನೆ. ಮಿಲ್ಲಿನ ಅಕ್ಕಿಯನ್ನು ತಿನ್ನುವವರಿಗೆ ಈ ಮಾತು ಒಪ್ಪಿಗೆಯಾಗದಿರಲಾರದು. ಆದರೆ ರೋಗಕ್ಕೆ ಇದೇ ಮೂಲಕಾರಣವಾಗುವುದಿಲ್ಲ. ಇದಕ್ಕೂ ಮಹತ್ತರವಾದ

ಕಾರಣಗಳೆಂದರೆ ವಾತಾವರಣದ ಬದಲಾವಣೆ, ನಿರುದ್ಯೋಗ, ಅನಿಷ್ಟ ಕೆಲಸ ನಿರ್ವಹಣ ಹಾಗೂ ಮನುಷ್ಯನ ಮನಸ್ಸು. ಮಲೆನಾಡು ಕೋಗಿಲೆ ಬಯಲನಾಡಿನ ಕಾಗೆಯಾಗುತ್ತದೆ; ನಾಳಿನ ಅನ್ನದ ಚಿಂತೆ ಹತ್ತಿದ ಮನುಷ್ಯನಿಗೆ ಅದಕ್ಕಿಂತ ಹೆಚ್ಚಿನ ರೋಗ ಬೇರೊಂದಿಲ್ಲ; ಕವಿಯಾಗಲು ಹುಟ್ಟಿದವನನ್ನು ಸೌದೆ ಮಾರಲು ಕೂರಿಸಿದರೆ ಅವನಿಗೆ ರೋಗವೇ ಗತಿ ; ಎಲ್ಲಕ್ಕೂ ಹೆಚ್ಚಾಗಿ ತನಗೆ ರೋಗವಿದೆಯೆಂದು ಭಾವಿಸುವವನನ್ನು ಯಾವ ವೈದ್ಯನೂ ' ರಿಪೇರಿ ' ಮಾಡಲಾರ.

ರೋಗವನ್ನು ಮರೆಸುವುದೂ, ಅದರ ಇರವನ್ನು ಉತ್ಪ್ರೇಕ್ಷೆ ಮಾಡಿ ಹೇಳುವುದೂ ಲೋಕದ ನಡತೆ. ನನಗೆ ರೋಗವಿದೆ ಎಂದು ನಂಬಿ ನಂಬಿ ಮನುಷ್ಯ ಇಲ್ಲದ ರೋಗವನ್ನು ತಾನಾಗಿ ಬರಮಾಡಿಕೊಳ್ಳುತ್ತಾನೆ. ರೋಗವಿದ್ದರೂ ಇಲ್ಲದಂತೆ ತೋರಿಸಿಕೊಂಡು, ಆಗಿರುವ ವಯಸ್ಸು ಕಡಿಮೆ ಹೇಳಿಕೊಂಡು ಮೆರೆಯುವವರು ಕೆಲವರಾದರೆ ಇಲ್ಲದ ರೋಗವನ್ನು ಚಿತ್ರವತ್ತಾಗಿ ಬಣ್ಣಿಸಬಲ್ಲವರು ಹಲವರು. " ನನಗೆ ಹೃದಯ ಬಹಳ ದುರ್ಬಲ ನೋಡಿ. ಸ್ವಲ್ಪ ಶಬ್ದವಾದರೂ ಅದು ಅವಲಕ್ಕಿ ಕುಟ್ಟುವುದಕ್ಕೆ ಪ್ರಾರಂಭಿಸುತ್ತದೆ " ಎಂದು ಎಲ್ಲಿ ಶಬ್ದವಾಗುವುದೋ ಎಂಬ ಭಯದಿಂದಲೇ ಹೃದಯ ಕ್ರಿಯೆ ನಿಂತು ಸಾಯುವವರೂ ಇದ್ದಾರೆ. ಇಂತಹವರನ್ನು ಕುರಿತೇ ಸರ್ವಜ್ಞ " ಹಾಡುತ್ತಾ ಹಾಡುತ್ತಾ ರಾಗ, ನರಳುತ್ತಾ ನರಳುತ್ತಾ ರೋಗ " ಎಂದು ಹೇಳಿದ್ದು.

ಸಾಮಾನ್ಯ ಜನತೆಗೆ ಬರುವ ದೈಹಿಕ ರೋಗಗಳನ್ನು ನೋಡಿದ್ದಾಯಿತು. ಅವುಗಳಿಗೆ ಡಾಕ್ಟರುಗಳು, ಹಕೀಮರು, ಪಂಡಿತರು ಪ್ರಾಯಶಃ ಚಿಕಿತ್ಸೆ ಮಾಡಬಲ್ಲರು. ಆದರೆ ಕೆಲವು ವಿಶೇಷ ರೋಗಗಳಿವೆ. ಅವುಗಳ ಸಾಮಾಜಿಕ ವ್ಯಾಪ್ತಿ, ಸಾಂಕ್ರಾಮಿಕ ಸ್ವರೂಪ ಬಹಳ ಹೆಚ್ಚಿ ನಿಧಾನದ ಮೇರೆಯನ್ನು ಮೀರಿ ನಿಂತುಬಿಟ್ಟಿವೆ. ಸಭೆಗಳಲ್ಲಿ ಅಧ್ಯಕ್ಷರಾಗಬೇಕೆನ್ನುವುದು ಒಂದು. ಪಂಡಿತನಾದ ಉಪನ್ಯಾಸಕನು ಮಂಡಿಸಿದ ವಿಷಯವನ್ನು ಜರೀ ಸಿಂಬಿಯ ಅಧ್ಯಕ್ಷ ಹೆಚ್ಚು ಬಲ್ಲವನಂತೆ ಟೀಕಿಸುತ್ತಾನೆ. ಕೆಲವು ಜನ ಸಭೆಗಳಿಗೆ ಬರಬೇಕಾದರೆ ಅವರು ಅಧ್ಯಕ್ಷರೇ ಆಗಬೇಕು. " ನಾನು ಪಂಡಿತನಲ್ಲ. ಈ ವಿಷಯದ ಮೇಲೆ ಹೆಚ್ಚು ಅಭ್ಯಾಸಮಾಡಿದವನಲ್ಲ "

ಎಂದು ಆರಂಭಿಸಿ ಪಂಡಿತ ಉಪನ್ಯಾಸಕನನ್ನು ದಡ್ಡನೆಂದು ಕರೆಯುವ ಮಟ್ಟಕ್ಕೆ ಹೋಗುತ್ತಾರೆ. ಸ್ವಪ್ರತಿಷ್ಠೆಯ ಪರಮಾವಧಿಯನ್ನು ತೋರುವ ಇದು ನಿಧಾನ ಶಾಸ್ತ್ರಾತೀತವಾದ ಒಂದು ಮಹಾ ರೋಗ. ಇನ್ನೊಂದು, ಬಿರುದುಬಾವಲಿಗಳಿಗೆ ಹೋರಾಡುವ ರೋಗ. ಮೂರೂವರೆ ಆಣೆ ಬೆಲೆ ಬಾಳುವ ಪಾರ್ಚಮೆಂಟ್ ಕಾಗದಕ್ಕಾಗಿ ಒಂದು ಜೀವಮಾನದ ಆದಾಯ, ನೀತಿ, ಧರ್ಮಗಳನ್ನು ಜನ ಬಲಿಗೊಡುತ್ತಾರೆ. ಅರಮನೆ, ಗುರುಮನೆಗಳಿಂದ ಒಂದು ಸಮಾರಂಭಕ್ಕೆ ಆಹ್ವಾನಪತ್ರ ತರಿಸಿಕೊಳ್ಳುವು ದಕ್ಕೆ ಹೊನ್ನನ್ನು ಮರಳಂತೆ ಎರಚುತ್ತಾರೆ. ಜನದ ಕಣ್ಣಿನಲ್ಲಿ ತಾನು ಬಹಳ ದೊಡ್ಡವನೆಂದು ಕಾಣಿಸಿಕೊಳ್ಳಬೇಕೆಂಬ ಈ ಪಿಡುಗು ಅನೇಕ ಸಾಮಾಜಿಕ ಸಮಸ್ಯೆಗಳ ಬುನಾದಿಯಾಗುತ್ತದೆ. ಅಸೆಂಬ್ಲಿ ಕೌನ್ಸಿಲ್‌ಗಳಿಗೆ 'ಮೆಂಬರಾಗಿ' ಹೋಗಿ ಅಲ್ಲಿ ಕೈಯೆತ್ತುವ ಯಂತ್ರಗಳಾಗಬೇಕೆಂಬ ಚಪಲ ಮತ್ತೊಂದು ಸಾಮಾಜಿಕ ಪಿಡುಗು. ಇದು ಕೇವಲ ಸಾರ್ವಜನಿಕರಿಗೆ ಅಂದರೆ ಸಂಸ್ಕೃತಿಯಲ್ಲಿ ಮುಂದುವರಿಯದವರಿಗೆ ಅನ್ವಯಿಸುವ ಮಾತಲ್ಲ. ಸಾಂಸ್ಕೃತಿಕ ಸಂಸ್ಥೆಗಳ ಹಣೆಯಬರಹವೂ ಇದೇ ಆಗಿದೆ. ಅಲ್ಲಿಯೂ ಅಧಿಕಾರಲಾಲಸೆ, ಸ್ವಪ್ರತಿಷ್ಠಾಪನ ಚಾಪಲ್ಯಗಳ ತಾಂಡವವಿದೆ. ಜನಗಳನ್ನು ಒತ್ತಾಯಮಾಡಿಯಾದರೂ ಅಧ್ಯಕ್ಷಪಟ್ಟ ಕಟ್ಟಿಸಿಕೊಳ್ಳಬೇಕು. ತಮ್ಮ ಕೀರ್ತಿಘೋಷವನ್ನು ಮಾಡಿಸಿಕೊಳ್ಳಬೇಕೆಂಬ ಹಂಬಲ ರುದ್ರ ನಾಟ್ಯವನ್ನಾಡುತ್ತದೆ.

ಲೋಕದಲ್ಲಿ ನಾಗರಿಕತೆ ಹೆಚ್ಚಿದಂತೆ ರೋಗಗಳು ಹೆಚ್ಚುತ್ತವೆ, ನಾಗರಿಕತೆಯೇ ಒಂದು ರೋಗ, ವೇದಗಳ ಕಾಲಕ್ಕೆ ಹಿಂದಿರುಗಿ, ಹಳ್ಳಿಗಳಿಗೆ ಹಿಂದಕ್ಕೆ ಹೋಗಿ, ಸ್ವಾಭಾವಕ್ಕನುಗುಣವಾದ ಬಾಳನ್ನು ನಡೆಸಿ ಎಂದು ಕೆಲವರು ಸಾರಿದ್ದಾರೆ. ಅವರು ವೇದಕಾಲದ ಜೀವನಕ್ಕೆ ಹಳ್ಳಿಗಳ ವಾಸಕ್ಕೆ ಹಿಂದಿರುಗಲು ಸಿದ್ಧರಾಗಿದ್ದಾರೆಂದಲ್ಲ; ಆದರೆ ಆಡಿದ್ದನ್ನು ಮಾಡಿಯೇ ತೋರಿಸಬೇಕೆಂಬ ನಿಬಂಧನೆಯೇನೂ ಇಲ್ಲವಲ್ಲ. ತಾವು ಅನುಸರಿಸಲಾಗದಿದ್ದುದನ್ನು ಇತರರಿಗೆ ಬೋಧಿಸುವುದೂ ರೋಗದ ಒಂದು ರೂಪ.

ರೋಗ ಕೇವಲ ಪ್ರಾಪಂಚಿಕ ಜಗತ್ತಿಗೇ ಸೇರಿದ್ದಲ್ಲ. ಅದು

ಅಧ್ಯಾತ್ಮದ ಲೋಕವನ್ನು ಆವರಿಸುತ್ತದೆ ಕೆಲವರಿಗೆ ಮೂರು ನಾಮ, ಗಂಧಾಕ್ಷತೆ, ಗೋಪೀ ಚಂದನಗಳನ್ನು ಕಂಡರೆ ತುಂಬ ಇಷ್ಟ; ಕೆಲವರಿಗೆ ಹಸಿರು ರುಮಾಲು, ಉದ್ದನೆಯ ಗಡ್ಡ ಕಂಡರೆ ತುಂಬ ಪ್ರೀತಿ. ತಮಗೆ ಬೇಕಾದುದನ್ನು ಅವರು ಧರಿಸಲು ನಮ್ಮ ಆಕ್ಷೇಪಣೆಯೇನೂ ಇಲ್ಲ. ಆದರೆ ಜಗತ್ತೇ ಮೂರುನಾಮ, ಉದ್ದನೆಯ ಗಡ್ಡ ಧರಿಸಬೇಕೆಂದು ಹಟ ಹಿಡಿಯುವುದು ರೋಗದ ಲಕ್ಷಣ. ಅನಾಧ್ಯವಾದ ಕೆಲವು ಆಚರಣೆಗಳಿಗೆ ಹೃದಯವನ್ನು ಮಾರುಗೊಟ್ಟ ಮನುಷ್ಯ ದೇವರ ಪೂಜೆ ಮಾಡಬೇಕು. ಬರಬರುತ್ತ ಅದೇ ಅಭ್ಯಾಸ ಬೆಳೆದು ದೇವರ ಪೂಜೆ ಮಾಡದಿದ್ದರೆ, ಕುರಾನ ಓದದಿದ್ದರೆ, ಇಗರ್ಜಿಗೆ ಹೋಗದಿದ್ದರೆ ಮನಸ್ಸಿಗೆ ನೆಮ್ಮದಿ ಇರುವುದಿಲ್ಲ. ರೋಗಿಗೆ ಮೈಯಲ್ಲಿ ಸ್ವಲ್ಪ ಕಾವು ಹುಟ್ಟ ರಕ್ತ ಕೂಡಲೆಂದು ಡಾಕ್ಟರು ಒಂದೆರಡು ಬಾಟಲ್ ಬ್ರಾಂದಿಯನ್ನು ಕೊಡುತ್ತಾನೆ. ರೋಗಿ ನಿರೋಗಿಯಾದ ಮೇಲೂ ಅದನ್ನು ಬಿಡುವುದಿಲ್ಲ. ಬ್ರಾಂದಿ ಕುಡಿಯದಿದ್ದರೆ ಅವನಿಗೆ ಅನ್ನ ಸೇರುವುದಿಲ್ಲ. ಹಾಗೆ ಕೆಲವರಿಗೆ ದೇವರಪೂಜೆ ಮಾಡಿದ ಹೊರತೂ ನಿತ್ಯ ನೈಮಿತ್ತಿಕ ಕಾರ್ಯಗಳು ಆರಂಭವಾಗುವುದಿಲ್ಲ. ಗಾಂಧಿಯವರು ಖಾದಿಯನ್ನು ಒಂದು ಆರ್ಥಿಕಸಾಧನವನ್ನಾಗಿ ಉಪಯೋಗಿಸಿಕೊಂಡರು. ಅವರ ಶಿಷ್ಯರಿಗೆ ಅದೊಂದು ರೋಗವಾಗುತ್ತ ಬಂತು. ಅದರೊಳಗೆ ಖಾದಿ ಹಾಕದಿರುವವರಿಗೆ ಪ್ರವೇಶವಿಲ್ಲವಾಯಿತು. ಖಾದಿ ಹಾಕದಿರುವವರು ಅವರ ಕಣ್ಣಿಗೆ ಕ್ಷುದ್ರಪಶುಗಳಂತೆ ಕಂಡುಬಂದರು.

ಎಲ್ಲಕ್ಕೂ ಮನಸ್ಸೇ ಮೂಲ. ಅದೊಂದು ಕೂರಲಗು. ನಾಶವೂ ಅದರಿಂದಾಗುತ್ತದೆ; ಸೃಷ್ಟಿಯೂ ಆಗುತ್ತದೆ. ಉಪಯೋಗಿಸುವ ಜಾಣ್ಮೆ ಬಲ್ಲವನಿಗೆ ಗೊತ್ತಿದೆ. ಮಿಕ್ಕವರ ಕೈಯಲ್ಲಿ ಅದು ಮಂಗನ ಕೈಯ ಮಾಣಿಕ್ಯ. ರೋಗ ಹುಟ್ಟುವುದೂ ಮನಸ್ಸಿನಿಂದಲೇ. ಮನೋಭೂಮಿಯೊಂದು ಶುಚಿಯಾಗಿದ್ದರೆ ರೋಗವಲ್ಲಿ ಹಾಯುವುದಿಲ್ಲ. ಅದಕ್ಕೇ ಹಿರಿಯರು ಹೇಳಿರುವುದು "ಮನವೆಂಬ ಕುಂಟು ಕುದುರೆಯನ್ನು ಕಡಿವಾಣ ಹಾಕಿ ಕೈಯಲ್ಲಿಟ್ಟುಕೊ" ಎಂದು.

---

# ೩. ಭಾರತದ ವಾಕ್ಚಿತ್ರಗಳು

ಮೂಕಚಿತ್ರಗಳಿಗೆ ಬದಲಾಗಿ ವಾಕ್ಚಿತ್ರಗಳು ಬಂದಾಗ ಇವುಗಳ ಆಯುಸ್ಸು ಬಹಳ ಅಲ್ಪವಾದುದೆಂದು ಕೆಲವರು ಭವಿಷ್ಯ ನುಡಿದರು. ಅಲ್ಪಾಯುವೆನಿಸಿಕೊಂಡ ವಾಕ್ಚಿತ್ರ ಉಳಿದು, ಚಿರಾಯುವೆನಿಸಿಕೊಂಡಿದ್ದ ಮೂಕಚಿತ್ರ ಹೇಳಹೆಸರಿಲ್ಲದಂತಾಯಿತು. ವೈಜ್ಞಾನಿಕ ಯುಗದ ಅದ್ಭುತ ವಿಜಯವನ್ನು ವಾಕ್ಚಿತ್ರ ಸಾರಿದಂತೆ ಬಂಡವಾಳಯುಗದ ಆವಿಷ್ಕಾರವನ್ನೂ ಸೂಚಿಸಿತು. ವಾಕ್ಚಿತ್ರ ಕೈಗಾರಿಕೆ ಬಂಡವಾಳಶಾಹಿ ಕೈಗಾರಿಕೆ, ಇದು ಕ್ಷಿಪ್ರದಲ್ಲಿಯೇ ಶ್ರಮಜೀವಿಗಳ ಕೈಗಾರಿಕೆಯಾಗುವ ಸೂಚನೆಯೂ ಕಡಿಮೆ.

ಆದರೆ ಶ್ರಮಜೀವಿಗಳ ನೆರವಿಲ್ಲದೆ ಯಾವ ಬಂಡವಾಳಶಾಹಿ ಉದ್ಯಮವೂ ತಲೆಯೆತ್ತುವುದಿಲ್ಲ. ಹಣ ತನ್ನಷ್ಟಕ್ಕೇ ಮರಿಹಾಕುವುದಿಲ್ಲ. ಶ್ರಮಜೀವಿಗಳ ಸತತ ಪ್ರಯತ್ನ ವಾಕ್ಚಿತ್ರ ಕೈಗಾರಿಕೆಯ ದಿಗ್ವಿಜಯವನ್ನು ಸ್ಥಿರಮಾಡಿಕೊಟ್ಟುದಲ್ಲದೆ, ಲಕ್ಷಾಂತರ ಶ್ರಮಜೀವಿಗಳ ಪ್ರೋತ್ಸಾಹನದಿಂದ ಬೆಳೆಯಿತು. ಚಿತ್ರ ನೋಡುವವರು ಹೆಚ್ಚಾಗಿ ಮಧ್ಯಮವರ್ಗದವರು ಮತ್ತು ಕೆಳವರ್ಗದವರು. ಅವರ ಕುರುಡು ಕಾಂಚಾಣಗಳಿಂದಲೇ ಇಂದು ಮುಂಬಯಿ, ಕಲ್ಕತ್ತೆ, ಮದರಾಸುಗಳಲ್ಲಿ 'ಸಿನೀಮಾ ರಾಜರು' ಮಹಲುಗಳನ್ನು ಕಟ್ಟಿಸಿರುವುದು.

ಮಧ್ಯಮ ಮತ್ತು ಕೀಳುವರ್ಗದ ಜನಕ್ಕೆ ವಾಕ್ಚಿತ್ರಕ್ಕಿಂತಲೂ ಉತ್ತಮ ವಿರಾಮಸಾಧನವಿಲ್ಲ. ನಾಲ್ಕೆಂಟು ಆಣೆಗಳಲ್ಲಿ ಎರಡು ಗಂಟೆಗಳ ವಿನೋದವನ್ನು ದೊರಕಿಸಿಕೊಳ್ಳಬಹುದು. ಜೀವನದಲ್ಲಿ ತಮಗೆ ದುರ್ಲಭ

ವಾದ ಎಲ್ಲ ಸೌಖ್ಯಗಳನ್ನೂ ರಜತಪರದೆಯ ಮೇಲೆ ಅನುಭವಿಸಬಹುದು. ಲಂಡನ್, ಕೈರೋ, ಅಮೇರಿಕಾ, ಫ್ರಾನ್ಸ್, ಡೆಲ್ಲಿ, ಮುಂಬಯಿ, ಬಾಗ್ದಾದ್ ಗಳಿಗೆ ಕಾಸು ಖರ್ಚಿಲ್ಲದೆ ಹೋಗಿಬರಬಹುದು. ಸುರಸುಂದರಿಯರ ತೋಳ ತೆಕ್ಕೆಯಲ್ಲಿ ವಿಲೀನನಾಗಬಹುದು. ಎರಡು ಗಂಟೆಗಳ ಕಾಲವಾದರೂ ಆಪು ತೆಗೆದುಕೊಂಡಂತೆ ವಿಸ್ಮೃತಿಪಡೆಯಬಹುದು.

ಆದರೆ ವಾಕ್ಚಿತ್ರದ ಉದ್ದೇಶ ಇಷ್ಟಕ್ಕೆ ಮುಗಿಯಲಿಲ್ಲವೆಂದು ಈಚೆಗೆ ಪ್ರದರ್ಶನಕ್ಕೆ ಬಂದ 'She Defends her Country, General Suvorov, Professor Mamlock' ಮೊದಲಾದ ರಷ್ಯಾ ಚಿತ್ರಗಳು ಸಾರಿದವು. ಜೀವನದ ಸಹಜ ಹಾಗೂ ಸಮಗ್ರ ಪರಿಚಯ, ವಿಕೃತ ಪರಿಸ್ಥಿತಿಯನ್ನು ಜಯಿಸಲು ಬೇಕಾದ ಮನೋದಾರ್ಢ್ಯ, ನವಜಗತ್ತಿನ ನಿರ್ಮಾಣಕ್ಕೆ ಬೇಕಾದ ಕ್ರತುಶಕ್ತಿಯನ್ನೊದಗಿಸಿ, ಮಾನವನನ್ನು ಎಚ್ಚರಿಸಲು ವಾಕ್ಚಿತ್ರ ಕೂಡ ಒಂದು ಸಾಧನ – ಪ್ರಬಲ ಸಾಧನವಾಗಬಹುದೆಂದು ರಷ್ಯಾ ತೋರಿಸಿ ಕೊಟ್ಟಿದೆ. ಈ ವಿಚಾರಲಹರಿ ಬಂಡವಾಳಗಾರರ ತೌರಾದ ಅಮೇರಿಕೆ ಯಲ್ಲಿಯೂ ಹರಿದು 'This Land is mine,' 'Seventh Cross,' 'For whom the Bell Tolls' ಬಗೆಯ ಚಿತ್ರಗಳು ಬರಲಾರಂಭಿಸಿವೆ.

ಅಮೇರಿಕೆಯ ಬಂಡವಾಳಶಾಹಿಯ ಅವಿವೇಕಗಳಷ್ಟೂ ಭಾರತದ ಬಂಡವಾಳಶಾಹಿಯಲ್ಲಿ ಮೂಡಿದವು. ಅಮೇರಿಕದಲ್ಲಿ ಹಗಲುಗಳ್ಳರು ವೀರಾಧಿವೀರರಾದಂತೆ ಭಾರತದ ವಾಕ್ಚಿತ್ರದಲ್ಲೂ ಸಾಹಸಭೀಮರಾದ ಹಗಲುಗಳ್ಳರ ಚರಿತ್ರೆಗಳು ಮೆರೆಯತೊಡಗಿದವು. ಬಾಂಬೇ ಟಾಕೀಸ್ ರವರು ತಮ್ಮ 'ಕಿಸ್ಮತ್'ನಲ್ಲಿ ಇದಕ್ಕೊಂದು ಸಾಂಸ್ಕೃತಿಕ ಬುನಾದಿ ಯನ್ನೂ ಕಟ್ಟಿಕೊಟ್ಟಿದ್ದಾರೆ. ಆದರೆ ಅಮೇರಿಕೆಯ ಬಂಡವಾಳಶಾಹಿ ವ್ಯಾಪಾರದೃಷ್ಟಿಯಿಂದಲಾದರೂ ಜನಜಾಗೃತಿ ಕೆಲಸ ಕೈಗೊಂಡಂತೆ, ಜನ ಜಾಗೃತಿಗೆ ಮನಸ್ಸು ಹಾಕುವ ತಿಳಿವು ಇನ್ನೂ ಭಾರತದ ಬಂಡವಾಳಗಾರರಲ್ಲಿ ಮೂಡಿಲ್ಲ.

ಈ ಒಂದೂವರೆ ದಶಕದಲ್ಲಿ ವಾಕ್ಚಿತ್ರ ಭಾರತದಲ್ಲಿ ಪ್ರಚಂಡ ಪ್ರಭಾವ ವನ್ನು ಬೆಳಸಿಕೊಂಡಿತು. ಪರಂಪರಾಗತವಾದ ನಾಟಕ, ಸಂಗೀತ, ಚಿತ್ರ, ಶಿಲ್ಪ, ಸಾಹಿತ್ಯಗಳೆಲ್ಲವನ್ನೂ ಬಾಯಿತುತ್ತು ಮಾಡಿಕೊಂಡಿತು. ಕಲಾ

ವಿದರು ಬಂಡವಾಳಗಾರರ ಕೈಗೊಂಬೆಗಳಾದರು. ಸಾಹಿತಿ ಅವರ ಅಭಿರುಚಿಗೆ ಅಕ್ಷರ ಪೋಣಿಸುವ ದರ್ಜಿಯಾದ. ಸಂಗೀತಗಾರ ಅವರ ಪೋಷಣೆಗೆ ಸಿಕ್ಕಿ ತನ್ನ ಕ್ರಿಯಾತ್ಮಕ ಕಲೆಗೆ ತಿಲತರ್ಪಣವನ್ನರ್ಪಿಸಿದ.

ಈ ಒಂದೂವರೆ ದಶಕದಲ್ಲಿ ಸಾವಿರಾರು ಚಿತ್ರಗಳು ಹೊರಬಿದ್ದಿವೆ. ಅವುಗಳ ಸಲುವಾಗಿ ಸಿನೀಮಾ ಗೃಹಗಳು ಹಾದಿಹಾದಿಗೆ ನಾಯಿಕೊಡೆಗಳಂತೆದ್ದಿವೆ. ಪ್ರದರ್ಶನಗೃಹಗಳು ಸಿಕ್ಕದೆ ಅನೇಕ ಚಿತ್ರಪಟಗಳು ಸಿನೀಮಾ ಕಾರ್ಖಾನೆಯಲ್ಲಿ ಕೊಳೆಯುತ್ತ ಬಿದ್ದಿವೆ. ಇಂದು ಬೀಡಿ ಮಾರುವ ಸತ್ತಾರ್, ಹೋಟೆಲ್ ನಾರಣಪ್ಪ, ಬಿದಿರು ಚಾಪೆ ಬುಟ್ಟಿಗಳನ್ನು ಮಾಡುವ ಅಲ್ಲೀಕಾಕಾ, ಸಟ್ಟಾವ್ಯಾಪಾರ ಮಾಡುವ ರಾಮನಾರಾಯಣ ಭೂತಚಂದ್, ಪಾತ್ರೆಅಂಗಡಿ ಪರಶುರಾಮ, ರೊಟ್ಟಿಅಂಗಡಿ ರಹೀಮ ಎಲ್ಲರೂ ಸಿನೀಮಾ ನಿರ್ಮಾಪಕರು! ಇವರ ಅಭಿರುಚಿಯ ಮಟ್ಟಕ್ಕೆ ತಮ್ಮನ್ನು ಸರಿಪಡಿಸಿಕೊಂಡು ಕಲಾವಿದರು, ಸಾಹಿತಿಗಳು ವರ್ಧಿಸುತ್ತಿದ್ದಾರೆ.

ಭಾರತದ ಮುಖಕ್ಕೆ ಕಪ್ಪು ಬಳಿದು, ಪರರಾಷ್ಟ್ರಗಳಲ್ಲಿ ಭಾರತಕ್ಕೆ ಅಪಮಾನವಾಗುವಂತೆ ಮಿಸ್ ಮೇಯೋ, ಬೆವರ್ಲಿ ನಿಕ್ಲಾಸ್, ಇತರ ಸಾಮ್ರಾಜ್ಯಭಕ್ತರು ಅಪಪ್ರಚಾರ ಮಾಡುತ್ತಿದ್ದಾರೆ ಎಂಬುದು ನಮ್ಮ ಆಕ್ಷೇಪ. ಆದರೆ ಮೇಯೋ, ಬೆವರ್ಲಿ ನಿಕ್ಲಾಸ್, ಅಮೆರಿಗಳು ನಮ್ಮ ದೇಶದ ವಾಕ್ಚಿತ್ರ ನಿರ್ಮಾಪಕರನ್ನು ಮೀರಿಸಲಾರರು. ಘಜ್ಲಿ ಸಹೋದರರು, ಸಿಲ್ವರ್ ಪಿಕ್ಚರ್ಸ್ ಇವರ ಚಿತ್ರಗಳು ಶಾಂತಾರಾಮನ ಶಾಕುಂತಲ, ಅತ್ರಿಯ ಮೃಚ್ಛಕಟಿಕ, ಜೆಮಿನಿಯವರ ಮಂಗಮ್ಮಗಳೇ ಸಾಕು ನಿದರ್ಶನ. ಇವರ ಚಿತ್ರಗಳಲ್ಲಿ ಭಾರತೀಯ ಸ್ತ್ರೀಯರು ಬ್ಯೂನಾಸ್ಐರ್ಸಿನ ಸ್ತ್ರೀಯರಂತೆ, ಪ್ಯಾರಿಯ ಬೀದಿಸೂಳೆಯರಂತೆ ಕುಪ್ಪಸ ಬಿಚ್ಚಿ, ತೊಡೆ ತೋರಿಸಿಕೊಂಡು ನಿಲ್ಲುತ್ತಾರೆ. ಹನ್ಸ್ ಕಂಪನಿಯವರು ಮೀನಾಕ್ಷಿಯಂತಹ ಮುದುಕಿಯನ್ನೂ ಅರೆಬೆತ್ತಲೆ ಮಾಡಿ ತೋರಿಸಿದರು. ಒಂದುಕಡೆ ಈ ಅನುಕರಣಾಭಾಸ; ಇನ್ನೊಂದುಕಡೆ ರಣಜಿತ್, ಪ್ರಕಾಶ್, ಪ್ರಭಾತ ಕಂಪನಿಯವರ ನಿರ್ವೀರ್ಯ ಭಾರತ ರಮಣಿಯ ಚಿತ್ರ. ಗಂಡನ ಹಲವು ಅವಿವೇಕಗಳನ್ನು ಸಹಿಸಿ ಅವನು ಮನೆಗೆ ಬರುತ್ತಲೂ 'ಚರಣ-ದಾಸಿ' ಯಾಗುವ ಹೆಣ್ಣುಯಂತ್ರದ ಕತೆ. ಮುಂಬಯಿಯ ಇಂತಹ ಹೊಲಸು

ಚಿತ್ರಗಳನ್ನು ನೋಡಿ 'ಹಿಂದೀ ಚಿತ್ರಗಳ ಸಮಾನವಿಲ್ಲ' ಎಂದು ಶುಕ ಸ್ತೋತ್ರಮಾಡುವ ನಮ್ಮ ವಿದ್ಯಾವಂತರ ತಂಡ. ಒಂದೊಂದು ಸಲ 'ನಯಾತರಾಣ,' 'ಮಿಲ್,' 'ಔರತ್,' 'ಯಾದ್' ಅಂತಹ ಚಿತ್ರ ಗಳು ಬಂದರೆ ಅವುಗಳನ್ನು ನೋಡುವವರಿಲ್ಲ, ಹೆಣ್ಣನ್ನು ಸೂಳೆಯೆಂದು ಕಾಣುವ ಮನೋಭಾವ, ಹೆಣ್ಣನ್ನು ಧರ್ಮದೇವತೆಯೆಂದು ಸಾರಿ ಆಕೆ ಯನ್ನು ನಿರುಪದ್ರವಿ, ನಿರುಪಯುಕ್ತ ಜೀವಿಯನ್ನಾಗಿ ತೋರಿಸುವ ಮನೋ ಭಾವ ಎರಡೂ ಭಾರತೀಯ ಚಿತ್ರಗಳ ವೈಶಿಷ್ಟ್ಯವಾಗಿದೆ.

ಇದರ ಕಾರಣ ವಿಚಾರಪರನಾದ ಪ್ರಗತಿಶೀಲನಾದ ಕತೆಗಾರನಿಗೆ ವಾಕ್ಚಿತ್ರದಲ್ಲಿ ಸ್ಥಾನವಿಲ್ಲದಿರುವುದು. ಅವನು ಮಾಲಿಕನ ಕೈಗೊಂಬೆಯಾಗಿ ಹೇಳಿದುದನ್ನು ಬರೆದು ಕೊಡಬೇಕು. ಸ್ವತಂತ್ರ ವಿಚಾರವನ್ನು ಅವನು ಮಂಡಿಸಹೋದರೆ ಅವನ ತಲೆಯ ಮೇಲೆ ಕಂಟ್ರ್ಯಾಕ್ಟ್ ಖಡ್ಗ. ಉತ್ತಮ ಸಾಹಿತಿಗಳಾದ ವಿ. ಸ. ಖಾಂಡೇಕರ್, ಪಂಡಿತ ಸುದರ್ಶನ, ಪಂಡಿತ ಇಂದ್ರ, ಇಳಂಗೋವರ್, ಅಬ್ಬಾಸ್ ಇವರ ಕೃತಿಗಳನ್ನು ರಜತಪರದೆಯ ಮೇಲೆ ಕಂಡಾಗ ಸಾಹಿತ್ಯಕ್ಕೆ ಯಾವ ಸ್ಥಾನ ಸಿಕ್ಕಿದೆಯೆಂಬುದು ವಿಶದ ವಾಗುತ್ತದೆ.

ಸಂಗೀತದ ಮೇಲೆ ವಾಕ್ಚಿತ್ರ ಮಾಡಿರುವ ಘಾಳಿಯೂ ಇಷ್ಟೇ ಭಯಂಕರವಾಗಿದೆ. ವಾಕ್ಚಿತ್ರದ ಆರಂಭದ ದೆಸೆಯಲ್ಲಿ ಮಾಸ್ಟರ್ ಕೃಷ್ಣಾ ಅವರು ಕೊಟ್ಟ ಕೆಲವು ಚೀಸುಗಳನ್ನೂ ಈಚೆಗೆ ಹೈದರ್ ಹುಸೇನ್ ಸೋದ ರರು ಪಾಂಚೋಲಿಯ ಮೊದಲನೆಯ ಮತ್ತು ಎರಡನೆಯ ಚಿತ್ರಗಳಿಗೆ ಕೊಟ್ಟ ಚೀಸುಗಳನ್ನು ಬಿಟ್ಟರೆ ಉಳಿದೆಲ್ಲ ವಿಲಾಯತಿ ಗ್ರಾಮಫೋನಗಳ ಔರಸಪುತ್ರರು. ವಿದ್ಯಾವಂತರು ಮೂಗುಮುರಿಯುವ ತಮಿಳು ಚಿತ್ರ ಗಳಲ್ಲಿಯೇ ಇನ್ನೂ ಸಂಗೀತ ಸ್ವಲ್ಪ ಜೀವಂತವಾಗಿರುವುದು. ಆದರೆ ಸುಬ್ಬುಲಕ್ಷ್ಮಿ, ತ್ಯಾಗರಾಜ ಭಾಗವತರಿಗೆ ತಮಗೆ ಬಾರದ ಹಿಂದೀ ಸಂಗೀತ ವನ್ನು ತಪ್ಪುತಪ್ಪಾಗಿ ಹಾಡುವ ಹುಚ್ಚು. ಸಂಗೀತದ ಅವನತಿಯನ್ನು ಪೂರ್ಣವಾಗಿ ಗ್ರಹಿಸಬೇಕಾದರೆ ರಣಜಿತ್ ಕಂಪೆನಿಯವರು ಗಾಯನಾಚಾರ್ಯ ತಾನಸೇನನ ಪಾತ್ರವನ್ನು ಸೈಗಲ್ಲನ ಕೈಯ್ಯಲ್ಲಿ ಮಾಡಿಸಿ, ಸಿನೀಮಾ ಹಾಡು ಗಳನ್ನು ಅವನಿಂದ ಹೇಳಿಸಿದುದೇ ಸಾಲದೆ? ಈ ವಿಷಯದಲ್ಲಿ ಅಪಮಾರ್ಗ

ವನ್ನು ನಿರ್ದೇಶಿಸಿ, ಎಲ್ಲರ ಅಭಿರುಚಿಯನ್ನು ಹಾಳುಮಾಡಿದವರು ಕಲ್ಕತ್ತೆಯ ನ್ಯೂ ಥಿಯೇಟರ್ಸ್‌ನವರು. ಹಲವು ಹನ್ನೊಂದು ಬಗೆಗಳನ್ನು ಬೆರಸಿ, ಅಳುಮೋರೆ ಹಾಕಿಕೊಂಡು, ಶೃತಿಗೆ ತರ್ಪಣ ಒಪ್ಪಿಸಿ ಅವರು ಹಾಡುವ ಬಗೆ ಇಂದು ಭಾರತದ ಸಿನೀಮಾ ನಿರ್ಮಾಪಕರ ಆದರ್ಶ. ಪಂಕಜ ಮಲ್ಲಿಕನ ಡ್ರಿಲ್ ಹಾಡುಗಳು, ಸೈಗಲ್ಲನ ಸ್ಮಶಾನಗಾನ, ಕೆ. ಸಿ. ಡೇ. ಯ ಮಿಲ್‌ಸಿಳ್ಳು ಇಂದು ಸಿನೀಮಾ ಸಂಪ್ರದಾಯವೆಂದು ಹೆಸರಾಗಿದೆ. ಅವು ಗಳಿಗೆ ತೆಲುಗು ಅಕ್ಷರಗಳನ್ನು ಜೋಡಿಸಿ ನಮ್ಮ ತೆಲುಗು ಚಿತ್ರ ನಿರ್ಮಾ ಪಕರು 'ದುಡ್ಡಿನ ಡಬ್ಬಿ'ಗಳನ್ನು ಬೆಳಸಿದ್ದಾರೆ.

ನಾಟ್ಯಕ್ಕೆ ಬಂದಿರುವ ಪಾಡು ಯಾವದಕ್ಕೂ ಬಂದಿಲ್ಲಲ್ಲೆಂದು ಹೇಳ ಬಹುದು. ಅಜೂರಿಯ ಕಿಚಡಿನಾಟ್ಯ, ಮುಮತಾಜ ಆಲಿಯ ಫರಾಸ್ ರೋಡ್ ಕುಣಿತ ಇಂದು ಕಥಕ, ಭರತನಾಟ್ಯ, ಕಥಾಕಳಿ, ಮಣಿಪೂರಿ ಗಳನ್ನು ಮೀರಿಸಿ ನಿಂತಿವೆ. ಅವಕ್ಕೆ ಜೋಡಿಸುವ ಹಾಡುಗಳ ಅರ್ಥ ದಾಕ್ಷಿಣಾತ್ಯರಿಗೆ ಅರ್ಥವಾಗುವುದಿಲ್ಲ. ಅದೇ ನಮ್ಮ ಪುಣ್ಯ. ನಾಟ್ಯದಲ್ಲಿ ಇನ್ನೂ ಈ ದರ್ಜೆಗೆ ಇಳಿಯದೆ ಭರತನಾಟ್ಯದ ಹೊರರೂಪವನ್ನಾದರೂ ರಕ್ಷಿಸಿರುವವರು ತಮಿಳುಚಿತ್ರ ನಿರ್ಮಾಪಕರು. ಕಥೆ, ಹಾಸ್ಯಗಳಲ್ಲಿ ತಮಿಳರ ಚಿತ್ರಗಳು ಎಷ್ಟೇ ಕೀಳಾಗಿದ್ದರೂ ಸಂಗೀತ ನಾಟ್ಯಗಳಲ್ಲಿ ಅವರು ನಿಜವಾದ ರಸದೂಟವನ್ನು ಒದಗಿಸುತ್ತಾರೆ.

ಮುಂಬಯಿಯ ಪ್ರಕಾಶ್ ಕಂಪೆನಿಯ ಚಿತ್ರಗಳು, ಪ್ರಭಾತ್ ಕಂಪೆನಿಯ ತುಕಾರಾಮ, ತಮಿಳು ಚಿತ್ರಗಳ ಜಾನಪದ ವಿಭಾಗಗಳಲ್ಲಿ ಮನಮುಟ್ಟುವ ಕೆಲವು ಹಾಡುಗಳು ಬಂದಿವೆ. ಅವು ಜಾನಪದ ಗೀತೆಗಳ ದಾಟಿಯಲ್ಲಿ ಕಟ್ಟಿದ ಹಾಡುಗಳು. ವಿಲಾಯಿತಿಯ ರಿಕಾರ್ಡುಗಳ ಪಡಿ ಯಚ್ಚು ಇಳಿಸುವ ಪರಿಪಾಠವನ್ನು ಬಿಟ್ಟು ಜಾನಪದಗೀತೆ (Folk Songs) ಗಳ ಧಾಟಿಗಳನ್ನು ಚಿತ್ರನಿರ್ಮಾಪಕರು ಅಳವಡಿಸಿಕೊಂಡರೆ ಚಿತ್ರ ಪ್ರಪಂಚದ ಸಂಗೀತದಲ್ಲಿ ಒಂದು ಕ್ರಾಂತಿಯನ್ನುಂಟುಮಾಡಬಹುದು.

ವಾಕ್ಚಿತ್ರಕ್ಕೆ ಹಾಡು, ನಾಟ್ಯಗಳು ಹೇಗೆ ಮುಖ್ಯವೋ ಹಾಗೆ ಸಂಭಾಷಣೆಯೂ ಮುಖ್ಯ. ಮಾತುಗಳು ಚಕಮಕಿ ಹೊಡೆದಂತೆ ಹಾರ ಬೇಕು. ಉತ್ತರ ಪ್ರತ್ಯುತ್ತರಗಳು ತಡೆಯೊಡೆಯಿಲ್ಲದೆ ಸಾಗಬೇಕು. ಮಹಾ

ರಾಷ್ಟ್ರದಿಂದ ಬರುವ ಹಿಂದೀ ಚಿತ್ರಗಳು, ನ್ಯೂ ಥಿಯೇಟರ್ಸ್ನವರ ಚಿತ್ರಗಳಲ್ಲಿ ಯಾರಾದರೂ ಮಾತನಾಡಲಾರಂಭಿಸಿದರೆ 'ದಮ್ಮಯ್ಯ ಸಾಕು ಹೋಗು ಮಾರಾಯ' ಎಂದು ಹೇಳದ ಪ್ರೇಕ್ಷಕನಿಲ್ಲ. ಸಂಭಾಷಣೆಯಲ್ಲಿಯೂ ತಮಿಳರದು ಒಂದು ಮೇಲುಗೈ. ರಾಮಯ್ಯ, ಇಳಂಗೋವನ್, ಪಾಪ ನಾಶನಂ ಶಿವನ್ ಇವರಿಗೆ ಚಿತ್ರಸಂಭಾಷಣೆಯ ಮರ್ಮ ಚೆನ್ನಾಗಿ ಮೈಗಂಟಿದೆ.

ಉದ್ದೇಶದೃಷ್ಟಿಯಿಂದ ನ್ಯೂ ಥಿಯೇಟರ್ಸ್ನವರ ಕೆಲವು ಚಿತ್ರಗಳು, ಮುಂಬಯಿಯ ನಿರ್ಮಾಪಕರ ಕಬೀರ, ಸಾಲ್ಮಾ, ರಾಯ್‌ದಾಸ್, ಜೆಮಿನಿ ಯವರ ಭಕ್ತ ನಂದನಾರ್ ಉತ್ಕೃಷ್ಟ ಚಿತ್ರಗಳು. ಕಲಾದೃಷ್ಟಿಯಿಂದ ಪ್ರಕಾಶರವರ 'ರಾಮರಾಜ್ಯ' ಮತ್ತು 'ಭರತ್ ಮಿಲಾಪ್' ಉತ್ತಮ ಚಿತ್ರಗಳು. ಸರ್ವಾಂಗ ಸೌಂದರ್ಯದ ದೃಷ್ಟಿಯಿಂದ ಕೇದಾರ ಶರ್ಮರ 'ಚಿತ್ರಲೇಖಾ,' 'ಕಲಿಯಾನ್,' ಭವ್ಯ ಚಿತ್ರಗಳು. ಆದರೆ ಇಂತಹ ಚಿತ್ರಗಳಿಗೆ ಪ್ರೋತ್ಸಾಹವಿಲ್ಲ. ಜನಕ್ಕೆ ಬೇಕು ಚಾರ್ಲಿ, ಎನ್. ಎಸ್. ಕೃಷ್ಣನ್ ಹಾಸ್ಯ, ಸೈಗಲ್ಲನ ಸಂಗೀತ, ರಣಜಿತರ ರಂಡೆಮನೆ ದೃಶ್ಯಗಳು, ಫಜ್ಲಿಯವರ 'ಫ್ಯಾಷನ್.'

ಭಾರತದಲ್ಲಿ ವಾಕ್ಚಿತ್ರ ಜನಜೀವನದ ಶಿಕ್ಷಣವಾಹಕವೂ, ಉದ್ಯೋಗ ವಿಹಾರ ಸಾಧನವೂ ಆಗಬೇಕಾದರೆ ಬಂಡವಾಳಗಾರರ ಹಿಡಿತ ತಪ್ಪಬೇಕು. ಜನಕ್ಕೆ ಕೀಳು ಅಭಿರುಚಿಯನ್ನು ಹುಟ್ಟಿಸಿ, ಅದನ್ನು ಸುಳಿದು ಬಾಳುವ ಪರಿಸ್ಥಿತಿ ಹೋಗಬೇಕು. ವಾಕ್ಚಿತ್ರ ಜನತೆಯ ರನ್ನಗನ್ನಡಿಯಾಗಿ ಅವರ ಸುಖದುಃಖಗಳ ಪ್ರತೀಕವಾಗಬೇಕು. ಅವರಿಗೆ ಧೈರ್ಯ, ಶಕ್ತಿ, ಸೌಂದರ್ಯಗಳನ್ನು ವಾಕ್ಚಿತ್ರವೂ ಒದಗಿಸಲೆತ್ನಿಸಬೇಕು.

———

## ೪. ಆತ್ಮಹತ್ಯಾಯೋಗ

ಸಾವಿನ ಹಿಂದೆ ದುಃಖ, ಕರುಣೆ, ವೇದನೆ, ಸಹಾನುಭೂತಿ ಸಾಮಾನ್ಯವಾಗಿರುತ್ತವೆ. ಈ ಭಾವಗಳ ಹೊಡೆತಕ್ಕೆ ಸಿಕ್ಕ ಸಾವಿಗೆ ಒಂದು ಪಟ್ಟವೂ ಸಿಕ್ಕಿಬಿಟ್ಟಿದೆ. ಯುದ್ಧದಲ್ಲಿ ಸತ್ತವರು ಅನೇಕರು ಬದುಕುತ್ತಾರೆ. ಅವರ ಹೆಸರಿನಲ್ಲಿ ನಾನಾ ಕೆಲಸಕಾರ್ಯಗಳಾಗುತ್ತವೆ. ಕೊನೆಗೆ ಮನೆಯಲ್ಲಿ ಆಯುಸ್ಸು ಮುಗಿದು ಸತ್ತವನು ಕೂಡ ವರ್ಷಕ್ಕೊಮ್ಮೆ ಸ್ಮರಿಸಲ್ಪಡುತ್ತಾನೆ. ಸಾವಿಗೆ ಬೇಕಾದ ಪರಿಕರಗಳು ಸಿದ್ಧಗೊಳಿಸಲ್ಪಟ್ಟಿವೆ. ಬದುಕಿದ ಮನುಷ್ಯ ಸತ್ತ ಹೆಣವಾದ ಕೂಡಲೆ ಅವನ ಮೇಲೆ ಅನೇಕಾನೇಕ ಕರ್ಮ ಸಂಸ್ಕಾರ ಗಳು ಜರುಗುತ್ತವೆ. ಬದುಕಿದಾಗ ಅನುಭವಿಸದಿದ್ದ ಅನೇಕ ಐಹಿಕ ಸುಖ ಗಳನ್ನು ಅವನು ಸತ್ತು ಅನುಭವಿಸುತ್ತಾನೆ. ಹೆಂಡತಿ-ಮಕ್ಕಳು, ಬಂಧು-ಬಳಗ, ಇಷ್ಟ-ಮಿತ್ರರು ದುಃಖಾವೇಗದಲ್ಲಿ ಆಡುವ ಮಾತುಗಳನ್ನು ಕೇಳಿದ ಸತ್ತ ಮನುಷ್ಯ ಎದ್ದು ಬಂದು ಇವರೆಲ್ಲರ ದುಃಖವನ್ನು ಉಪಶಮನಮಾಡ ಬೇಕೆಂದು ಬಯಸಿದರೆ ತಪ್ಪೇನ್ನಲಾಗುವುದಿಲ್ಲ. ಮುಸಲ್ಮಾನ, ಕ್ರೈಸ್ತರಲ್ಲಿ ಸತ್ತವನು ದೈವಾಂಶಸಂಭೂತನಾಗಿಬಿಡುತ್ತಾನೆ. ಅವನಿಗೆ ವಿಶೇಷ ಗೌರವ ಸಲ್ಲುತ್ತದೆ. ವೀರಶೈವರು ಸಾಯುವ ಧೈರ್ಯವನ್ನು ಕೊಡುವುದಕ್ಕೆ 'ಶರಣರನ್ನು ಮರಣದಲ್ಲಿ ನೋಡು' ಎಂಬ ಮಹಾಮಂತ್ರವನ್ನು ಉದ್ಘೋಷಿಸಿದ್ದಾರೆ. ವೇದ, ಕುರಾನ, ಬೈಬಲ್ಲುಗಳಿಲ್ಲದರಲ್ಲಿಯೂ 'ಸಾಯುವುದಕ್ಕೆ ಹೆದರಬೇಡಿ' ಎಂಬ 'ಅಭೀಃ' ಮಂತ್ರ ಉಪದೇಶಿಸಲ್ಪಟ್ಟಿದೆ.

ಆದರೆ ಸಾವು ಕೆಲವು ರೀತಿಯಲ್ಲಿ ಮಾತ್ರ ಸಾಗಬೇಕು. ಕಾಹಿಲೆ ಬಿದ್ದು ಹಾಸಿಗೆಯ ಮೇಲೆ ನರಳುತ್ತ ಸಾಯಬಹುದು; ಮೋಟಾರಿನ ಅಪಘಾತಕ್ಕೆ ಸಿಕ್ಕಿ ಸಾಯಬಹುದು; ಹೃದಯವಿಕಾರದಿಂದ ತಾಂಬೂಲವನ್ನು ಮೆಲ್ಲುತ್ತಾ 'ಬುಟ್ಟಿಯನ್ನು' ಒದೆಯಬಹುದು - ಆದರೆ ಆತ್ಮಹತ್ಯೆ ಮಾತ್ರ ಮಾಡಿಕೊಳ್ಳಕೂಡದು.

ದೇವಭಾಷೆಯಾದ ಸಂಸ್ಕೃತವೂ ಪರಿಪೂರ್ಣವಲ್ಲವೆನ್ನುವುದಕ್ಕೆ 'ಆತ್ಮಹತ್ಯ' ಪದವೇ ಸಾಕ್ಷಿ. ಸಾಕ್ಷಾತ್ ಗೀತಾನಾಯಕನೇ 'ನೈನಂ ಛಿಂದಂತಿ ಶಸ್ತ್ರಾಣಿ । ನೈನಂ ದಹತಿ ಪಾವಕಃ। ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ ।' ಎಂದು ಹೇಳಿದನು. ಏನು ಮಾಡಿದರೂ ಆತ್ಮ ಸಾಯುವುದಿಲ್ಲ ಎಂದು ಹೇಳಿದರೂ 'ಆತ್ಮಹತ್ಯ' ಪದ ಹೇಗೋ ಚಲಾವಣೆಗೆ ಬಂದುಬಿಟ್ಟಿದೆ. ಮನುಷ್ಯ ತನ್ನ ಕೈಯಿಂದ ತಾನೇ ಸತ್ತರೆ ಆತ್ಮಹತ್ಯವೆಂದು ಕರೆಯುತ್ತಾರೆ. ಇದು ಯಾವ ಸ್ವರೂಪವನ್ನು ಬೇಕಾದರೂ ತೆಗೆದುಕೊಳ್ಳಬಹುದು. ನೈಟ್ರಿಕ್ ಆಸಿಡ್, ಪೊಟಾಸಿಂ ಸೈನೇಡ್ ಮೊದಲಾದ ತಂಪಾದ ಪಾನೀಯಗಳನ್ನು ಸ್ವೀಕರಿಸಬಹುದು, ನೇಣು ಹಾಕಿಕೊಳ್ಳಬಹುದು, ಮೋಟಾರು ರೈಲುಗಳಿಗೆ ಸಿಕ್ಕಿಕೊಳ್ಳಬಹುದು, ಚಾಕು, ಚೂರಿ, ಪಿಸ್ತೂಲುಗಳನ್ನು ಉಪಯೋಗಿಸಬಹುದು, ಎತ್ತರದ ಮಹಡಿಯಿಂದ ಬೀಳಬಹುದು, ಕೆರೆ, ಭಾವಿ, ಸಮುದ್ರಗಳನ್ನು ಆಶ್ರಯಿಸಬಹುದು. ಗಮ್ಯ, ಯಾವದಾದರೂ ಗುರಿ ಒಂದೇ! ಎದೆಯಲ್ಲಿ ಅವಲಕ್ಕಿ ಕುಟ್ಟುವುದು ನಿಲ್ಲಬೇಕು; ಉಸಿರು ಸುಸ್ತಾಗಬೇಕು; ಕೈಕಾಲು ತಣ್ಣಗಾಗಬೇಕು; ಕಣ್ಣುಗುಡ್ಡೆ ಮೇಲಕ್ಕೆ ಸಿಕ್ಕಿಕೊಳ್ಳಬೇಕು – ಆ ಪ್ರಾಣಿ ಸಂಪೂರ್ಣವಾಗಿ ಸಾಯಬೇಕು. ಈ ಪ್ರಯತ್ನಗಳನ್ನು ಮಾಡಿ ವಿಫಲನಾಗುವವನೂ ಯುದ್ಧರಂಗದಿಂದ ಹಿಮ್ಮೆಟ್ಟುವವನೂ ಒಂದೇ ತರಗತಿಗೆ ಸೇರುತ್ತಾರೆ. ಕೋರ್ಟು, ಕಛೇರಿ ಹತ್ತಬೇಕಾಗುತ್ತದೆ; ಜುಲ್ಮಾನೆ ಸಜಗಳನ್ನು ಅನುಭವಿಸಬೇಕಾಗುತ್ತದೆ. ಸಾಯಬೇಕೆಂಬ ನಿರ್ಧಾರಕ್ಕಿಂತಲೂ, ಆಕಸ್ಮಾತ್ತಾಗಿ ಬದುಕಿದರೆ ಆಗುವ ಅನುಭವಕ್ಕೆ ಹೆದರಿ ಮನುಷ್ಯ ತನ್ನನ್ನು 'ಒಪ್ಪ' ಮಾಡಿಕೊಳ್ಳುವ ಕೆಲಸವನ್ನು ಅಚ್ಚುಗಟ್ಟಾಗಿ ನೆರವೇರಿಸುತ್ತಾನೆ.

ಆದರೆ ಸಾವಿಗಿರುವ ಸ್ಥಾನ, ಮರ್ಯಾದೆ, ಘನತೆ ಆತ್ಮಹತ್ಯಕ್ಕಿಲ್ಲ.

ಕ್ರೈಸ್ತರು ಆತ್ಮಹತ್ಯ ಮಾಡಿಕೊಂಡವನ ಶವವನ್ನು ತಮ್ಮ ಪ್ರೇತಭೂಮಿಯಲ್ಲಿ ಹೂಳಿಸುವುದಿಲ್ಲ. ಹಿಂದುಗಳು ಅವನಿಗೆ 'ಪಿಶಾಚಿ'ಯ ಪಟ್ಟ ಕಟ್ಟುತ್ತಾರೆ. ಅವನು ಸತ್ತಂದಿನಿಂದ ಅವನ ಮನೆಯವರು ಅಂತ್ಯಜರಾಗುತ್ತಾರೆ. ಸಮಾಜದಲ್ಲಿ ಆವರ ಸ್ಥಾನಕ್ಕೆ ಚ್ಯುತಿ ಬರುತ್ತದೆ. ಅವರ ಬದುಕು - ಬಾಳು ಸಾವಿಗಿಂತ ಕಡೆಯಾಗುತ್ತದೆ. ಆತ್ಮಹತ್ಯಕ್ಕೀಡಾದ ಪ್ರಾಣಿಯ ವಿಚಾರ ಪಿಸುಮಾತಿನಲ್ಲಿ ಸಾಗುತ್ತದೆ. ನಾಲ್ಕು ಜನ ಸೇರಿದಾಗ ಅವನ ಹೆಸರೆತ್ತುವುದು ಘೋರ ಅಪರಾಧವಾಗುತ್ತದೆ.

ಈ ಬಗೆಯ ಸಾಮಾಜಿಕ ನಿಷೇಧಕ್ಕೆ ನ್ಯಾಯದ ಸಮ್ಮತಿಯಿಲ್ಲ. ಸಮಾಜದ ಶೀಲ ಸಿಸ್ತುಗಳನ್ನು ನಿಯೋಜಿಸುವ ಮುಂದಾಳುಗಳಿಗೆ ಕಾವ್ಯ, ಇತಿಹಾಸ, ಪರಂಪರೆಗಳ ಪರಿಚಯವಿಲ್ಲದಿರುವುದೇ ಈ ದಬ್ಬಾಳಿಕೆಗೆ ಮೂಲ ಕಾರಣವೆನ್ನಬಹುದು. ರಾಮಾಯಣ, ಮಹಾಭಾರತ ಕಾಲಗಳಿಂದಲೂ ಆತ್ಮಹತ್ಯಕ್ಕೆ ಮಹತ್ವವಿದೆ. ಗಂಡ ಸತ್ತಮೇಲೆ ಹೆಂಗಸು ಅವನ ಚಿತೆಯ ಮೇಲೆ ಸುಟ್ಟುಕೊಳ್ಳುವುದು 'ಸತಿ' ಎಂಬ ಹೆಸರಿನಲ್ಲಿ ಪ್ರಸಿದ್ಧವಾಗಿದೆ. ಉತ್ತರ ರಾಮಾಯಣದಲ್ಲಿ ಸ್ವಯಂ ಸೀತಾದೇವಿಯೇ ಲೋಕದ ಪರುಷ ವಚನಗಳನ್ನು ಸಹಿಸಲಾಗದೆ ತನ್ನ ಇಹಲೋಕದ ವ್ಯಾಪಾರವನ್ನು ಮುಗಿಸುತ್ತಾಳೆಂದು ಉಲ್ಲೇಖವಾಗಿದೆ. ಗಯಟೆಯ ವರ್ತರ್, ಷೇಕ್ಸಪಿಯರನ ರೋಮಿಯೋ, ನಿಜಾಮಿಯ ಫರ್‍ಹಾದ್ ಮೊದಲಾದ ಶೃಂಗಾರ ನಾಯಕರು ಆತ್ಮಹತ್ಯ ಮಾಡಿಕೊಂಡು ಅಮರವಾದ ಸ್ವರ್ಗವನ್ನಡರಿದ್ದಾರೆ. ಅವರ ಮೇಲಣ ಕಾವ್ಯಗಳನ್ನು ಆನಂದದಿಂದ ಇಂದಿಗೂ ಜನ ಓದಿ ಆನಂದಿಸುತ್ತಾರೆ. ವಿಜಯನಗರದ ಅರಸರು ಯುದ್ಧದಲ್ಲಿ ಮಡಿದರೆ ಅವರ ಸಹಸ್ರಾರು ಮಡದಿಯರು ಮತ್ತು ಬಂಗಾರದವರು ಆತ್ಮಹತ್ಯ ಮಾಡಿಕೊಳ್ಳುತ್ತಿದ್ದುದು ಇತಿಹಾಸಪ್ರಸಿದ್ಧವಾಗಿದೆ. ಸ್ವಯಂವರ - ಸ್ವಯಂವಧುಗಳಿಗೆ ಹಿರಿಯರ ಅಪ್ಪಣೆ ದೊರೆಯದಿದ್ದರೆ ಪ್ರಿಯ ಪ್ರೇಯಸಿಯರಿಬ್ಬರೂ ಆತ್ಮಹತ್ಯ ಮಾಡಿಕೊಳ್ಳುವುದು ಜಪಾನಿನಲ್ಲಿ ಪ್ರಸಾರದಲ್ಲಿದೆ. ಆತ್ಮಗೌರವದ ಸಲುವಾಗಿ ಆತ್ಮಹತ್ಯ ಮಾಡಿಕೊಳ್ಳುವುದು ಹಿರಿತನದ ಲಕ್ಷಣವೆಂದು ಜಪಾನಿನಲ್ಲಿ ಇಂದಿಗೂ ಗಣಿಸಲ್ಪಡುತ್ತಿದೆ.

ಇತ್ತೀಚಿನ ಘಟನಾವಳಿಗಳಿಂದ ಆತ್ಮಹತ್ಯೆಗೆ ಒಂದು ವಿಶಿಷ್ಟ ಸ್ವರೂಪ

ಬಂದುಬಿಟ್ಟಿದೆ. ಹಿಟ್ಲರ್, ಮುಸಲೋನಿಗಳ ದಬ್ಬಾಳಿಕೆಯನ್ನು ಸಹಿಸಲಾಗದೆ ಸಾವಿರಾರು ಮಂದಿ ಜ್ಯೂ ಜನರು ಆತ್ಮಹತ್ಯ ಮಾಡಿಕೊಂಡರು. ಆಸ್ಟ್ರಿಯಾ, ಜೆಕೊಸ್ಲೋವಾಕಿಯಾ ಆಕ್ರಮಣವಾದ ಮೇಲೆ ಅಲ್ಲಿನ ಅನೇಕ ಮುಖ್ಯ ನಾಯಕರು ಆತ್ಮಹತ್ಯ ಮಾಡಿಕೊಂಡರು. ಆತ್ಮಹತ್ಯೆಯ ಬಗ್ಗೆ ಹಿಂದಿದ್ದ ಕೀಳು ಅಭಿಪ್ರಾಯವೂ ತುಚ್ಛ ಭಾವನೆಯೂ ಕ್ರಮಕ್ರಮೇಣ ಲಯವಾಗಿ ಅದಕ್ಕೆ ಯಥೋಚಿತವಾಗಿ ಸಲ್ಲಬೇಕಾದ ಹಿರಿಯ ಸ್ಥಾನ ದೊರೆಯಲಾರಂಭವಾಗಿದೆ.

ಆತ್ಮಹತ್ಯೆಗೆ ಧರ್ಮದ ಪಟ್ಟವನ್ನು ಕಟ್ಟಿರುವವರಲ್ಲಿ ಜೈನರು ಗಮನಾರ್ಹರು. ವಾರ್ಧಕ್ಯದಲ್ಲಿ ಉಪವಾಸ ಮಾಡಿ (ಸಲ್ಲೇಖನ) ಪ್ರಾಣವನ್ನು ತ್ಯಜಿಸುವುದು ಅವರಲ್ಲಿ ಒಂದು ಮುಖ್ಯ ವ್ರತವೆನಿಸಿಕೊಂಡಿದೆ. ಚಂದ್ರಗುಪ್ತ ಚಕ್ರವರ್ತಿಯಂತಹ ಪರಾಕ್ರಮಶಾಲಿ ಶ್ರವಣಬೆಳಗೊಳಕ್ಕೆ ಬಂದು ಸಲ್ಲೇಖನವನ್ನಾಚರಿಸಿದನೆಂದು ಉಲ್ಲೇಖವಿದೆ. ಮಹಾತ್ಮಾ ಗಾಂಧಿಯವರು ಇದಕ್ಕೆ ಆಧುನಿಕ ಸ್ವರೂಪವನ್ನಿತ್ತು ಮೇಲಿಂದ ಮೇಲೆ ಸಾಯುವ ಸಲುವಾಗಿ ಉಪವಾಸ ವ್ರತವನ್ನಾಚರಿಸುತ್ತಾರೆ.

ಹಿಂದೆ ಆತ್ಮಹತ್ಯೆಗೆ ಗೌರವವಿಲ್ಲದಿದ್ದುದಕ್ಕೆ ಅದು ಹೇಡಿತನದ ಲಕ್ಷಣವೆಂಬ ಭಾವನೆಯೇ ಕಾರಣವಿರಬಹುದು ಬದುಕುವುದು ಕಷ್ಟ. ಸಾಯುವುದು ಸುಲಭ ಎಂಬ ತಪ್ಪುಭಾವನೆ ಬಹಳ ಜನರ ಮನಸ್ಸಿನಲ್ಲಿದೆ. ಜ್ವರ ಬಂದಾಗ ಮೂರು ಗ್ರೇನ್ ಕ್ವಿನೀನ್ ತೆಗೆದುಕೊಳ್ಳುವುದಕ್ಕೆ ಅರ್ಧ ಗಂಟೆ 'ಮೀನ ಮೇಷ' ನೋಡಿ ಗಂಟಲು ಸರಿಮಾಡಿಕೊಳ್ಳುವುದಕ್ಕೆ ಕಾಫಿ, ಬಾಯಿ ಸರಿಮಾಡಿಕೊಳ್ಳುವುದಕ್ಕೆ ಉಪ್ಪಿನಕಾಯಿ ಹೊಂದಿಸಿಕೊಳ್ಳುವ ಮನುಷ್ಯನಿಗೆ ನೈಟ್ರಿಕ್ ಆಸಿಡ್ ಕುಡಿಯುವ ವೀರನ ಸ್ಥೈರ್ಯ ಹೇಗೆ ಗೊತ್ತಾಗಬೇಕು. ಆತ್ಮಹತ್ಯ ಮಾಡಿಕೊಳ್ಳುವುದು ಹೇಡಿತನದ ಲಕ್ಷಣವೆನ್ನುವವರು ಒಂದು ಸೂಜಿ ತೆಗೆದುಕೊಂಡು ತಮ್ಮ ಬೆರಳನ್ನು ಸ್ವಲ್ಪ ಚುಚ್ಚಿಕೊಳ್ಳಲಿ ಗೊತ್ತಾಗುತ್ತದೆ. ತನ್ನ ದೇಹವನ್ನು ದಂಡಿಸಿಕೊಂಡು ಸಂಯಮ, ಶಕ್ತಿಸಂವರ್ಧನಗಳನ್ನು ಮಾಡಿಕೊಳ್ಳುವುದು ಹೇಗೆ ಹಟಯೋಗವೆನಿಸಿಕೊಂಡು ಆತ್ಮಗೌರವದಿಂದ ಜಗತ್ತಿನಲ್ಲಿ ವಿಜೃಂಭಿಸುತ್ತಿದೆಯೋ ಹಾಗೆ ವ್ಯಕ್ತಿಯ ಎಲ್ಲ ಐಹಿಕ ಪ್ರಾರಬ್ಧಗಳನ್ನು ಕೊನೆಗಾಣಿಸುವ ಈ ಮಹಾ

ಯೋಗಕ್ಕೆ 'ಆತ್ಮಹತ್ಯಾಯೋಗ'ವೆಂದು ಕರೆದು ಇದಕ್ಕೆ ಪಂಚಮವೇದದ ಸ್ಥಾನವನ್ನು ಕೊಡಬೇಕೆಂದು ಆಗ್ರಹಮಾಡಬಾರದೇತಕ್ಕೆ ?

ಆತ್ಮಹತ್ಯೆಗೆ ನೈತಿಕ ವಿರೋಧವೊಂದಿದೆ. ತನ್ನ ಆಶ್ರಿತರನ್ನೂ ಇಷ್ಟಮಿತ್ರರನ್ನೂ ನಿಷ್ಕರುಣೆಯಿಂದ ತ್ಯಜಿಸಿ ಹೋಗುವವನು ಪಾಪಿ ಎನ್ನುವ ಭಾವನೆಯಿದೆ. ಚಿಕ್ಕವಯಸ್ಸಿನಲ್ಲಿ ಸಾಯುವವರಿಗೂ ಇದು ಅನ್ವಯಿಸುತ್ತದೆಂಬುದನ್ನು ವಿಮರ್ಶಕರು ಮರೆಯುತ್ತಾರೆ. ಇಷ್ಟರು ಮಿತ್ರರು ಇದ್ದರೆ ಅಂತಹ ಜಗತ್ತನ್ನು ಯಾವನು ತಾನೆ ತೊರೆಯುತ್ತಾನೆ. ಅವರನ್ನು ಹುಡುಕಿಕೊಂಡು ಹೋಗುವುದರ ಸಲುವಾಗಿ ಅಲ್ಲವೇ ಮಾನವನು ಈ ಲೋಕವನ್ನು ತ್ಯಜಿಸುವುದು. ಮುಂಬಯಿ ಬೇಡವಾದರೆ ಕಲಕತ್ತೆಗೆ ಹೋದಂತೆ! ಲೋಕಕ್ಕೆ ತಾನು ಬೇಡ-ಲೋಕಕ್ಕೆ ತನ್ನ ಕೃತಿಸೇವೆ ಅವಶ್ಯಕವಿಲ್ಲ. ಇಷ್ಟರು ಮಿತ್ರರು ಇವರಿಗೆ ತನ್ನ ಸಖ್ಯ ಅಸಹ್ಯ! ತಾನು ಮಾಡುವ ಪ್ರತಿಯೊಂದು ಕೃತಿ, ಆಡುವ ಪ್ರತಿಯೊಂದು ಮಾತೂ ವಿಪರೀತ ಪರಿಣಾಮಕ್ಕೆ ಕಾರಣವಾಗುತ್ತದೆ. ಇಂತಹ ವ್ಯಕ್ತಿ ಲೋಕಹಿತಾರ್ಥವಾಗಿ ತನ್ನ ವ್ಯಾಪಾರವನ್ನು ಮುಗಿಸಿದರೆ ತಪ್ಪೇನು ?

ಇದು ನಿಜವಾಗಿ ವಿಚಾರಯುಗವಾಗಿದ್ದರೆ, ಕ್ರಾಂತಿಯೇ ಈ ಯುಗದ ಬೀಜಮಂತ್ರವಾಗಿದ್ದರೆ, ಸುಧಾರಣೆಯೇ ಈ ಯುಗದ ಸುಹಾದಿಯಾಗಿದ್ದರೆ ಆತ್ಮಹತ್ಯೆಯಂತಹ ಪರಮೋಪಕಾರಿ, ಪರಮಾಹ್ಲಾದಕಾರಿ ಆಚರಣೆಯ ಬಗ್ಗೆ ಇರುವ ಅನಾದರ, ಅಪಚಾರ, ಸಂಪ್ರದಾಯಬದ್ಧ ಕ್ರೌರ್ಯ ತೊಲಗಬೇಕು.

———

## ೫. ಪೊರಕೆ

ಜಗತ್ತಿನ ಅತಿ ನಿಕೃಷ್ಟ ವಸ್ತುಗಳಲ್ಲಿ ಪೊರಕೆಯೂ ಒಂದು. ಯಾವದು ಎಲ್ಲರ ಬಾಳುವೆಗೆ ಅತ್ಯವಶ್ಯಕವೋ ಅದಕ್ಕೆ ಸ್ಥಾನ ಭ್ರಷ್ಟತ್ವ, ಅಪಮಾನ. ಮಹಾರಾಜನಾಗಲಿ, ಮಹಾರಥಿಯಾಗಲಿ, ಮಹಾಕವಿಯಾಗಲಿ ಪೊರಕೆಯ ಸಹಾಯವಿಲ್ಲದೆ ಬಾಳಲಾರ. ಆದರೂ ಪೊರಕೆಯೆಂದರೆ ಮೂಗು ಮುರಿಯ ದವರು ವಿರಳ. ನಮ್ಮ ದೇಶದಲ್ಲಿ ಅಂತ್ಯಜರಿಗೆ ಯಾವ ಸ್ಥಾನವೋ ಅದೇ ಸ್ಥಾನ ಪೊರಕೆಗೆ.

ನಿರುಪಯೋಗಿಯಾದ ಜಪಾನ ಬೊಂಬೆಗಳು, ಬಣ್ಣದ ಸಾಮಾನು ಗಳು ಮೊದಲಾದುವುಗಳನ್ನು ನಾವು ಸೊಗಸಾದ ಕರೀಮರದ ಬೀರು ಮಾಡಿಸಿ, ಗಾಜಿನ ತೋರುಬಾಗಿಲು ಹಾಕಿಸಿ ಇಡುತ್ತೇವೆ. ಪೊರಕೆ ಮುಖ ಮರಸಿಕೊಂಡು ಕದದ ಮರೆಯಲ್ಲಿ ಅಂಜಿ ಅಳುಕಿ ಕುಳಿತಿರಬೇಕು. ಜತೆಗೆ ಅವಹೇಳನ ಮಾತುಗಳು. 'ಪರಕೆ ಹೇರಿಕೊಂಡರೆ ಪರಕ್ಕೆ ಹೋದಾನೆ'—ಪರಕೆ ಹೇರಿಕೊಂಡವನು ಪರಕ್ಕೆ ಹೋಗದಿದ್ದರೆ ಸವರನ್ ಹೇರಿಕೊಂಡವನು ಹೋಗುತ್ತಾನೆಯೇ ? ಪೊರಕೆಯನ್ನು ಕೀಳೆಂದು ತೋರಿಸಿ ತಮ್ಮ ಚಾಪಲ್ಯವನ್ನು ಜನ ತೋರಿಸಿಕೊಂಡಿದ್ದಾರೆ.

ವಸ್ತುಗಳನ್ನು ಉಪಯುಕ್ತ, ಸುಂದರ ಎಂದು ಎರಡು ಭಾಗವಾಗಿ ತಿಳಿದವರು ವಿಭಾಗಿಸುತ್ತಾರೆ. ಜೀವನಕ್ಕೆ ಅವಶ್ಯಕವಾದುದನ್ನು ಉಪ ಯುಕ್ತವೆಂದೂ, ಮನಸ್ಸಿಗೆ ಅವಶ್ಯಕ ವಾದುದನ್ನು ಸುಂದರವೆಂದು ಅವರು ಭಾವಿಸಿದ್ದಾರೆ. ಜೀವನಕ್ಕೆ ಅನ್ನ, ಗಾಳಿ, ನೀರು ಹೇಗೆ

ಅತ್ಯವಶ್ಯಕವೋ ಹಾಗೆಯೇ ಪೊರಕೆಯೂ ಅವಶ್ಯಕ. ಅರಮನೆ ಕಟ್ಟಿಸಿರ ಬಹುದು, ಚಿನ್ನದ ಸುಪ್ಪತ್ತಿಗೆಯ ಮೇಲೆ ಹೊರಳಾಡುತ್ತಿರುವುದು—ಮನೆ ಯೆಲ್ಲಾ ಕಸ ತುಂಬಿಕೊಂಡರೆ ಅಂತಹ ಮನೆಯಲ್ಲಿ ವಾಸಿಸುವನ ಗತಿಯೇನು ? ಧೂಳಿನ ಕಣದಲ್ಲಿ ಕೂಡಿಬರುವ ಹಲವಾರು ರೋಗರುಜಿನ ಗಳಿಗೆ ಅವನು ಪಕ್ಕಾಗಬೇಕಾಗುತ್ತದೆ. ಅವನ ಬಾಳು ಕರುಣಾಮಯ ವಾಗುತ್ತದೆ. ಅದಕ್ಕೇ ಹಿಂದೆ ಬಲ್ಲವರು ಮನುಷ್ಯ ಉದ್ದುದ್ದ ಮೀಸೆ ಬಿಡಿಸ ಬೇಕೆಂದು ವಿಧಾಯಕ ಮಾಡಿದುದು. ಬಾಯಿಗೆ ಹೋಗುವ ಆಹಾರ, ಮೂಗಿಗೆ ಹೋಗುವ ಉಸಿರು ಪೊರಕೆ ಮೀಸೆಯ ಮಧ್ಯೆ ಶುಚಿಗೊಂಡು, ಶುದ್ಧಗೊಂಡು ದೇಹವನ್ನು ಸೇರುತ್ತದೆ. ದೇಹಕ್ಕೆ ಪೊರಕೆ ಜರಡಿಯಂತೆ ಉಪಯುಕ್ತವಾಗುತ್ತದೆ. ನವನಾಗರಿಕತೆ ಬೆಳೆಯುತ್ತ ಪೊರಕೆಮೀಸೆ ಬೆಳಸುವ ಪದ್ಧತಿಗೇ ಧಕ್ಕೆ ತಗುಲಿ, ಆಧುನಿಕ 'ಮೀಸಾರಹಿತ' ತರುಣರು ಹಲವಾರು ರೋಗರುಜಿನಾದಿಗಳಿಗೆ ತುತ್ತಾಗುವುದಕ್ಕೆ ಕಾರಣವಾಯಿತು.

ಪೊರಕೆ ಆಧ್ಯಾತ್ಮಿಕ ಸಾಧನೆಗೂ ಅತ್ಯವಶ್ಯಕವಾದುದೆಂದು ತೋರಿಸಿಕೊಟ್ಟವರು ಭಗವಾನ್ ಶ್ರೀ ರಾಮಕೃಷ್ಣ ಪರಮಹಂಸರು. ಅಹಂ-ಭಾವವನ್ನು ಅಳಿಸುವುದಕ್ಕೆ ಭಗವಾನರು ನೀಳವಾಗಿ ಕೂದಲು ಬೆಳಸಿ ಅದನ್ನೇ ಪೊರಕೆಯಹಾಗೆ ಬಳಸಿಕೊಂಡು ಶೌಚಕೂಪಗಳನ್ನು ಶುದ್ಧಿ ಮಾಡುತ್ತಿದ್ದರಂತೆ. ಪೂಜ್ಯ ಗಾಂಧಿಜೀಯವರು ಪೊರಕೆಗೆ ಯೋಗ್ಯಸ್ಥಾನ ನಿರ್ದೇಶಿಸುವುದಕ್ಕೆ ತುಂಬ ಶ್ರಮಪಟ್ಟಿದ್ದಾರೆ. ಹಿಂದೂ ಸಮಾಜದ ಪರಂಪರಾಪ್ರಾರಬ್ಧವಾದ ಜಾತಿ, ಮತಗಳ ಗೊಂದಲವನ್ನು ಅಡಗಿಸುವು ದಕ್ಕೆ ಪೊರಕೆಯೇ ದಿವ್ಯಸಾಧನವೆಂಬ ಶೋಧವನ್ನು ಅವರು ಮಾಡಿದರು. ಅಂತ್ಯಜರು ಪೊರಕೆ ಹಿಡಿದು ಶೌಚಕೂಪಗಳನ್ನೂ ಬೀದಿಗಳನ್ನು ಗುಡಿ ಸುತ್ತಾರೆಂದಲ್ಲವೇ ಅವರಿಗೆ ಸಮಾಜದಲ್ಲಿ ಕೀಳುಸ್ಥಾನ. ಎಲ್ಲರೂ ಪೊರಕೆ ಹಿಡಿದು ಈ ಕೆಲಸಕ್ಕೆ ನಿಂತರೆ ಒಂದು ಗುಂಪನ್ನು ಅಂತ್ಯಜರೆಂದು ಕರೆಯುವ ಪರಿಪಾಠ ತಪ್ಪಿಹೋಗುತ್ತದೆಂಬುದು ಮಹಾತ್ಮರ ಶೋಧ. ಆಡಿದುದನ್ನು ಮಾಡಿತೋರಿಸುವ ಮಹಾತ್ಮರು ತಾವೇ ಪೊರಕೆ ಹಿಡಿದು ಕಸಗುಡಿಸುವ ಮತ್ತು ಶೌಚಶುದ್ಧಿಮಾಡುವ ಕೆಲಸವನ್ನು ಕೈಗೊಂಡರು. ಅವರ ಅಮೃತಹಸ್ತಸ್ಪರ್ಶದಿಂದ ಪೊರಕೆ ನರಕದಿಂದ ನಾಕಕ್ಕೇರಿತು.

ಸರ್ವಾಂಗ ಸುಂದರಿ ನೀಲನಾಗಿಣಿ. ಆಕೆ ಪೊರಕೆಹಿಡಿದು ಬೀದಿ ಗುಡಿಸುವುದಕ್ಕೆ ನಿಂತಳು. ಅವಳನ್ನು ಹಿಂಬಾಲಿಸಿ ಹಲವು ಸುಶಿಕ್ಷಿತ ತರುಣರು ಪೊರಕೆ ಹಿಡಿದರು. ನಗರಸಭೆಯ ಕೆಲಸ ಹಗುರವಾಯಿತು, ಊರು ಶುಚಿಯಾಯಿತು—ಪೊರಕೆಗೆ ಗೌರವ ಬಂತು. ಆದರೆ ಕೆಲವು ಕುಮತಿಗಳು ಇದರ ಕೀರ್ತಿಯನ್ನು ನೀಲನಾಗಿಣಿಯ ಸೌಂದರ್ಯಕ್ಕೆ ಅರ್ಪಿಸಿದರು, ಪೊರಕೆಯಿಂದ ಕಿತ್ತುಕೊಂಡು. ಲೋಕವಲ್ಲ ನಿಂದಕರ ಬಾಯಿ ಮುಚ್ಚುವವರು ಯಾರು ?

ಸಾಮ್ಯವಾದದ ಇತಿಹಾಸ ಬರೆಯುವವರು ಅದರ ಎಲ್ಲ ಕೀರ್ತಿಯನ್ನು ಕಾರ್ಲ್ ಮಾರ್ಕ್ಸ್ ಮಹಾಶಯನಿಗೆ ಅರ್ಪಿಸುತ್ತಾರೆ, ಇದು ಇತಿಹಾಸದ - ಸತ್ಯದ ವಿಪರ್ಯಾಸ. ಕಾರ್ಲ್ ಮಾರ್ಕ್ಸ್ ಸಾಮ್ಯವಾದದ ಪ್ರಚಾರಕ. ಅವನಿಂದಲೇ ಸಾಮ್ಯವಾದ ಹುಟ್ಟಲಿಲ್ಲ. ಸಾಮ್ಯವಾದ ಹುಟ್ಟಿದ್ದು ಪೊರಕೆಯಿಂದ. ಎಂದು ಲೋಕವಲ್ಲಿ ಪೊರಕೆಯ ಅವತಾರವಾಯಿತೋ ಅಂದು ಸಾಮ್ಯವಾದ ಜನ್ಮತಾಳಿತು. ಹಿಂದುಸ್ಥಾನದಲ್ಲಿ ಅದು ಪೊರಕೆಯ ರೂಪವನ್ನು, ವಿಲಾಯಿತಿಯಲ್ಲಿ ಅದು ಬ್ರಷ್ ರೂಪವನ್ನು ತಾಳಿತು

ತತ್ವ, ಧರ್ಮ, ಸಮಾಜ, ವ್ಯಕ್ತಿ ಎಲ್ಲ ದೃಷ್ಟಿಯಿಂದಲೂ ಪೊರಕೆಯ ಸ್ಥಾನ ಹಿರಿಯಸ್ಥಾನ. ನಾಳೆ ರಾಷ್ಟ್ರಗಳ ಧ್ವಜಗಳ ಮೇಲೆ ಇರಬೇಕಾದುದು ಯೂನಿಯನ್ ಜಾಕಿನ ಬಣ್ಣದ ಪಟ್ಟಿಗಳಲ್ಲ, ಅಮೇರಿಕೆಯ ಬಾವುಟದ ಮೇಲಿರಬೇಕಾದುದು ನಕ್ಷತ್ರಗಳಲ್ಲ, ಭಾರತದ ಬಾವುಟದ ಮೇಲಿರಬೇಕಾದುದು ಚರಕವಲ್ಲ. ಶ್ರಮಜೀವಿಗಳ ಬಾವುಟದ ಮೇಲಿರಬೇಕಾದುದು ಸುತ್ತಿ, ಕುಡುಗೋಲಲ್ಲ. ಎಲ್ಲ ಬಾವುಟಗಳ ಮೇಲೂ ಪೊರಕೆಯಿರಬೇಕು. ಮಾನವರನ್ನೆಲ್ಲ ಒಂದುಗೂಡಿಸಿ ಅವರ ಹೃದಯದಲ್ಲಿ ಸಮಾನಧರ್ಮದ ಬೆಳಕನ್ನು ಮೂಡಿಸುವ ಮಹಾಸಾಧನವೆಂದರೆ ಪೊರಕೆ.

ಇಂತಹ ಪೊರಕೆ ದಾರಿ ತಪ್ಪಿ ನಡೆಯುತ್ತಿರುವ ಜಗತ್ತಿನ ಎಲ್ಲ ಸಾಮ್ರಾಜ್ಯಶಾಹಿ, ಅತಿಮಾನವ, ಧನಿಕ ವರ್ಗದವರಿಗೆ ದಾರಿದೋರಿಸಿ ವಿಶ್ವಶಾಂತಿಗೆ ಭದ್ರಬುನಾದಿ ಹಾಕಲೆಂದು ನನ್ನ ಹಾರಯಿಕೆ.

———

## ೬. ಶ್ರಾದ್ಧ

ಶ್ರಾದ್ಧಕ್ಕೂ ಸಾವಿಗೂ ತುಂಬಾ ಋಣಾನುಬಂಧ. ಬದುಕಿರುವವರನ್ನು ಕೆಲವುಸಲ ಭರ್ತ್ಸನೆಗಾಗಿ 'ನಿನ್ನ ಶ್ರಾದ್ಧ' ಎಂದರೂ ಇದು ಸತ್ತವರಿಗೇ ಸಂಬಂಧಪಟ್ಟ ಕರ್ಮ. ಶ್ರಾದ್ಧದ ಸುಖ ಕಾಣಬೇಕಾದರೆ ಮನುಷ್ಯ ಸಾಯಬೇಕಾದುದಗತ್ಯ.

ಸತ್ತವರನ್ನು ನಾವು ಹಲವು ವಿಧದಲ್ಲಿ ಕರೆಯುತ್ತೇವೆ. ಕೈಲಾಸವಾಸಿಯಾದ, ವೈಕುಂಠವಾಸಿಯಾದ, ಪರಬ್ರಹ್ಮಸ್ವರೂಪಿಯಾದ, ನೆಗೆದು ಬಿದ್ದ, ಕಂತೆ ಒಗೆದ, ಗೋತಾ ಒಗೆದ, ಮಣ್ಣಾದ ಇತ್ಯಾದಿ. ಸತ್ತವರಿಗೆ ಶ್ರಾದ್ಧ ಮಾಡುತ್ತೇವೆ, ಪಿಂಡೋದಕಗಳನ್ನು ಕೊಡುತ್ತೇವೆ, ಪುಣ್ಯಕಾರ್ಯಗಳನ್ನು ಆಚರಿಸುತ್ತೇವೆ. ಅವುಗಳ ಹಂತ, ಸ್ವರೂಪ ಸತ್ತ ವ್ಯಕ್ತಿಯ ಯೋಗ್ಯತೆಯನ್ನು ಸಂಬಂಧಿಸಿರುತ್ತದೆ.

ಶ್ರಾದ್ಧಮಾಡುವ ಉದ್ದೇಶ, ಸತ್ತವರನ್ನು ಸ್ಮರಿಸಿಕೊಳ್ಳುವುದು ಮತ್ತು ಕರ್ಮಚಕ್ರದಲ್ಲಿ ಸಿಕ್ಕಿರುವ ಅವರಿಗೆ ಅನ್ನೋದಕಗಳನ್ನೊದಗಿಸುವುದು. ವೇದದಲ್ಲಿ ಶ್ರಾದ್ಧದ ಹೆಸರೇ ಇಲ್ಲ, ಅದು ಮನುಧರ್ಮಶಾಸ್ತ್ರ, ಗೃಹ್ಯಸೂತ್ರಗಳ ಕಾಲಕ್ಕೆ ತಲೆಹಾಕಿತು. ಶ್ರಾದ್ಧಮಂತ್ರಗಳಲ್ಲಿ ಮುಖ್ಯವಾಗಿ ಈ ಭಾವನೆ ಕಂಡುಬರುತ್ತದೆ.

"ಈ ಲೋಕ, ಮಧ್ಯಲೋಕದಲ್ಲಿರುವ ನಮ್ಮ ಪಿತೃಗಳು ಉತ್ತಮ ಲೋಕಕ್ಕೆ ಹೋಗಲಿ. ಪ್ರಾಣವಾಯು ಸ್ವರೂಪದಲ್ಲಿರುವವರು ಪರಿಶುದ್ಧ

ರಾಗಲಿ. ಅಮೃತಪಾನಮಾಡಲು ಯೋಗ್ಯತೆಪಡೆದಿರುವ ನಮ್ಮ ಪಿತೃಗಳು ನಮ್ಮನ್ನು ರಕ್ಷಿಸಲಿ."

ಶ್ರಾದ್ಧ ಕರ್ಮದಲ್ಲಿ ನಿಷ್ಠೆಯುಳ್ಳವರಲ್ಲಿ ಸ್ವರ್ಗ, ನರಕಗಳೆಂಬ ಎರಡು ಲೋಕಗಳಿವೆ. ಪಿತೃಗಳು ಸ್ವರ್ಗಕ್ಕೆ ಹೋಗಲಿಕ್ಕೆ ನಾವು ಸಹಾಯಮಾಡ ಬೇಕೆಂಬ ನಂಬಿಕೆ ಕಂಡುಬರುತ್ತದೆ. ವಿಚಾರವಾದಿಗಳೂ, ಹೈತುಕವಾದಿ ಗಳೂ, ಬಸವಾನುಯಾಯಿಗಳೂ, ನಾನಕಪಂಥಿಗಳೂ ಸ್ವರ್ಗ ನರಕ ಕಲ್ಪನೆ ಯನ್ನೂ ಒಪ್ಪುವುದಿಲ್ಲ. ಇಲ್ಲಿಂದ ನಾವು ಪಾರ್ಸಲ್‌ಮಾಡುವ ವಡೆ, ಒಬ್ಬಟ್ಟು, ಚಿರೋಟಿ, ಪಿಂಡಗಳು ಡೆಡ್ ಲೆಟರ್ ಆಫೀಸಿಗೆ ದಾಖಲೇ ವಿನಾ ಪಿತೃಗಳಿಗೆ ತಲುಪುವುದಿಲ್ಲವೆಂದೂ ಅವರು ನಂಬುತ್ತಾರೆ. ಕನಕದಾಸರ ಬಗ್ಗೆ ಒಂದು ಕಥೆಯುಂಟು (ಇದೇ ಕತೆಯನ್ನೂ ಬಾಬಾ ನಾನಕರಿಗೂ ಅನ್ವಯಿಸಿ ಹೇಳುತ್ತಾರೆ.) ಒಂದು ದಿನ ಕೆಲವು ಬ್ರಾಹ್ಮಣರು ನೀರಿನಲ್ಲಿ ನಿಂತು ಪಿತೃಗಳಿಗೆ ತರ್ಪಣ ಕೊಡುತ್ತಿರುವುದನ್ನು ದಾಸರು ಕಂಡರಂತೆ. 'ಏಕೆ ಹೀಗೆ ಮಾಡುತ್ತಿರುವಿರಿ' ಎಂದು ಅವರು ಕೇಳಿದಾಗ ಬ್ರಾಹ್ಮಣರು ನಮ್ಮ ಪಿತೃಗಳ ದಾಹ ಉಪಶಮನವಾಗುವುದಕ್ಕೆ ಎಂದು ಹೇಳಿದರಂತೆ. ದಾಸರು ದಕ್ಷಿಣದ ಕಡೆಗೆ ಮುಖ ತಿರಿವಿ ನಿಂತು ಬೊಗಸೆ ಬೊಗಸೆ ನೀರು ತೆಗೆದು ಚೆಲ್ಲುತ್ತಾ ಬಂದರಂತೆ. 'ಇದೇನು ವಿಪರೀತ ವರ್ತನೆ' ಎಂದು ಬ್ರಾಹ್ಮಣರು ಕೇಳಲು, ದಾಸರು 'ನೂರಾರು ಮೈಲಿ ದೂರದಲ್ಲಿ ನಮ್ಮ ಗದ್ದೆ ಇದೆ. ನೀರಿಲ್ಲದೆ ಪೈರು ಒಣಗುತ್ತಲಿದೆ, ಅಲ್ಲಿಗೆ ನೀರು ಸರಬರಾಯಿ ಮಾಡುತ್ತಿದ್ದೇನೆ' ಎಂದು ಹೇಳಿದರಂತೆ. ಬ್ರಾಹ್ಮಣರು ನಕ್ಕು 'ಅಯ್ಯೋ ಮೂರ್ಖಾ, ನೂರಾರು ಮೈಲಿ ದೂರದಲ್ಲಿರುವ ಗದ್ದೆಗೆ ಇಲ್ಲಿಂದ ನೀರನ್ನು ಸಾಗಿಸುವುದಕ್ಕಾಗುತ್ತದೆಯೋ' ಎಂದು ಕೇಳಲು ದಾಸರು 'ನೂರಾರು ಮೈಲಿ ದೂರದಲ್ಲಿರುವ ಗದ್ದೆಗೆ ನೀರು ಕಳುಹಿಸುವುದಕ್ಕಾಗದೆ ಇರಲು ಸಾವಿರಾರು ಕೋಟ್ಯನುಕೋಟಿ ಮೈಲಿ ಆಚೆ ಇರುವ ಪಿತೃಲೋಕಕ್ಕೆ ನಿಮ್ಮ ತರ್ಪಣದ ನೀರು ಕಳಿಸುವುದಕ್ಕೆ ಸಾಧ್ಯವೇ' ಎಂದು ಕೇಳಿದರಂತೆ.

ವಿಚಾರವಾದ ದೇಶದ ಮುಂದಿದ್ದರೂ ಮೂಢ್ಯಪರಂಪರೆ ಅನೂ ಚಾನವಾಗಿ ನಡೆಸಿಕೊಂಡು ಬಂದಿರುವ ನಿರರ್ಥಕ ಕರ್ಮಗಳಲ್ಲಿ ಶ್ರಾದ್ಧವೂ ಒಂದು. ಮನೆಯಲ್ಲಿ ಮಕ್ಕಳು ಸಾಯುತ್ತಿದ್ದರೂ ಸಾಲಮಾಡಿಯಾದರೂ

ನಾಲ್ಕು ಜನ ಬ್ರಾಹ್ಮಣರಿಗೆ ಪಿತೃಗಳ ಹೆಸರಿನಲ್ಲಿ ತುಪ್ಪ ಕುಡಿಸಬೇಕು. ವರ್ಷದ ೩೬೪ ದಿನಗಳೂ ಮಾಡಬಾರದ ಅನಾಚಾರ, ಅತ್ಯಾಚಾರ ಮಾಡುತ್ತಿದ್ದರೂ ಒಂದು ದಿನ ಮಗುಟ ಉಟ್ಟು ಕೈಗೆ ದರ್ಭೆ ತಗುಲಿಸಿ ಅತಿ ಭಕ್ತಿಯಿಂದ ಶ್ರಾದ್ಧ ಮಾಡಬೇಕು. ಬದುಕಿದ್ದ ಪಿತೃಗಳನ್ನು ಗೋಳಿಟ್ಟು, ಅರೆದು ಕುಡಿದಿದ್ದರೂ ಅವರು ಸತ್ತಮೇಲೆ ವರ್ಷಕ್ಕೊಮ್ಮೆ ಶ್ರಾದ್ಧಮಾಡಿ ಅವರ ಋಣವನ್ನು ತೀರಿಸಬೇಕು.

ಜನನವಿತ್ತು, ಈ ಲೋಕಕ್ಕೆ ನಮ್ಮನ್ನು ತಂದು, ವಿದ್ಯಾಬುದ್ಧಿ ಕಲಿಸಿದ ಪಿತೃಗಳಿಗೆ ನಮ್ಮ ಕೃತಜ್ಞತೆ ಸಮರ್ಪಿಸಬೇಡವೋ, ಅವರ ಪುಣ್ಯ ನಾಮವನ್ನು ಸ್ಮರಿಸಬೇಡವೋ? ಮೊದಲನೆಯದಾಗಿ ಈ ಲೋಕಕ್ಕೆ ನಾವು ಬರುತ್ತೇವೆ, ನಮ್ಮನ್ನು ಇಲ್ಲಿ ಕರೆದು ತಂದುಬಿಡಿ ಎಂದು ಪಿತೃಗಳನ್ನು ನಾವು ಬೇಡಲಿಲ್ಲ. ಅವರ ಕಾಮಕೂಟದಲ್ಲಿ ನಾವು ಹುಟ್ಟಿದವರು. ನಮ್ಮನ್ನು ಅವರು 'ವಿನೋದ ತೆರಿಗೆ' (Entertainment Tax) ಎಂದು ಭಾವಿಸುತ್ತಿದ್ದರಲ್ಲದೆ ಜಗತ್ತಿನ ಉದ್ಧಾರಕ್ಕೆ ಹುಟ್ಟಿದ ಕಾರಣಪುರುಷರೆಂದು ತಿಳಿಯುತ್ತಿರಲಿಲ್ಲ. ನಾವು ಅವರಿಗೆ ನಮ್ಮ ಕೃತಜ್ಞತೆಯನ್ನು ಸಮರ್ಪಿಸಬೇಕಾದರೆ ಹಬ್ಬಮಾಡಿ, ಅಜೀರ್ಣವಾಗುವಷ್ಟು ಕೂಳು ಹೊಡೆಯಬೇಕೆಂಬ ಭಾವನೆ ಯಾಕೆ? ಅನ್ನದಾನ ಮಾಡಬೇಕಾದರೆ ನಾಲ್ಕು ಜನ ಹಸಿದ ಭಿಕಾರಿಗಳಿಗೆ ಹಾಕಬಾರದೇ? ತಿಂದು ತಿಂದು ಕೂಳುರಕ್ಕಸರಾಗಿರುವ ಹಾರವರನ್ನು ಹಿಡಿದು ತಂದು, ಅವರಿಂದ ಆಹಾರಸಂಹಾರ ಮಾಡಿಸುವುದೇಕೆ? ಅವರು ತಿನ್ನುವಷ್ಟು ತಿಂದು, ತಿಂದರ ನಾಲ್ಕರಷ್ಟು ಚೆಲ್ಲಿಹೋಗುವುದಕ್ಕೆ ಅವಕಾಶ ಮಾಡಿಕೊಡುವುದೇಕೆ? ಅದಕ್ಕೆ ಒಬ್ಬ ಜನಪದಸಾಹಿತಿ 'ಶ್ರಾದ್ಧ ಮಾಡಿ ವಡೆ ತಿನ್ನುವುದಕ್ಕಿಂತ ಮದುವೆ ಮಾಡಿ ಒಬ್ಬಟ್ಟು ತಿನ್ನುವುದು ಲೇಸು' ಎಂದು ಹೇಳಿರುವುದು.

ಬ್ರಾಹ್ಮಣ್ಯದ ಪ್ರೇತಶರೀರವನ್ನು ಕಾಪಾಡಿಕೊಂಡು ಬಂದಿರುವ ಒಂದು ದೊಡ್ಡ ಸಂಸ್ಥೆಯೆಂದರೆ ಶ್ರಾದ್ಧಕರ್ಮ. ಅದು ಬ್ರಾಹ್ಮಣ ಪುಜಾರಿಗಳ ಮತ್ತು ವೈದಿಕರ ಬೆಲೆವೆಣ್ಣು. ಶ್ರಾದ್ಧ ಅವರ ಒಂದು ಪ್ರಬಲ ಸಾಧನ. ಮೊದಲೇ ಅರ್ಥವಿಲ್ಲದ ಮಂತ್ರಗಳು, ಅದನ್ನು ಹೇಳುವವನಿಗಂತೂ ಅದರ ಗಂಧ ಗೊತ್ತಿಲ್ಲ, ಹೇಳಿಸಿಕೊಳ್ಳುವವನು ಪಾಪ - ಭಕ್ತಿ

ಮುಗ್ಧ. ಅವನಿಗೆ ಅರ್ಥವಾಗುವ ಸಂಭವವೇ ಇಲ್ಲ. ಶ್ರಾದ್ಧ ಮಾಡ ದಿದ್ದರೆ ಮನೆ ಹಾಳಾಗಿಬಿಡುತ್ತೆ ಎಂಬ ಭಾವನೆಯನ್ನು ಬ್ರಾಹ್ಮಣರು ಗೃಹಸ್ಥರ ಮನಸ್ಸಿನಲ್ಲಿ ಚೆನ್ನಾಗಿ ಅಚ್ಚೊತ್ತಿಬಿಟ್ಟಿರುತ್ತಾರೆ. ಅವನು ಅದನ್ನು ಆಚರಿಸುವುದು ಪಿತೃಗಳ ಮೇಲಣ ಪ್ರೀತಿಗಲ್ಲ - ಭೀತಿಗೆ.

ನಮ್ಮ ಮನೆಯಲ್ಲೂ ವರ್ಷ ವರ್ಷ ಈ ನಾಟಕ ಅಭಿನಯವಾಗುತ್ತಲೇ ಇರುತ್ತದೆ. ಸಂಸ್ಕೃತ ಮಂತ್ರಗಳ ಪಟಾಟೋಪಕ್ಕೆ ಬೆರಗಾಗಿದ್ದ ನಾನೂ ಮೊದಮೊದಲು ಇದರ ಬಗ್ಗೆ ಗೌರವವನ್ನೇ ತಳೆದಿದ್ದೆ. ಮಂತ್ರಗಳನ್ನು ಅರ್ಥಮಾಡಿಕೊಳ್ಳುವುದಕ್ಕೆ ಯತ್ನಿಸಿದ ಮೇಲೆ ನಂಬಿಕೆ, ಭಕ್ತಿ, ಗೌರವಗಳು ಕಡಿಮೆಯಾಗುತ್ತ ಬಂದವು. ಅವರವರ ಕರ್ಮಕ್ಕೆ ಅವರವರು ಬದ್ಧರು ಎಂದು ನಾವು ನಂಬಿದರೆ ಪಿತೃಗಳ ಕರ್ಮವನ್ನು ನಮ್ಮ ವಡೆ ಒಬ್ಬಟ್ಟು ಬದಲಾಯಿಸಿ ಅವರನ್ನು ನರಕದಿಂದ ನಾಕಕ್ಕೆ ಒಯ್ಯುತ್ತದೆ, ಎಂದು ನಂಬುವುದು ಎಷ್ಟು ಹಾಸ್ಯಾಸ್ಪದ. ನನ್ನ ಪಿತೃಗಳಿಗೆ ನಾನು ಋಣಿಯೇನೊ ನಿಜ. ಅವರ ಋಣವನ್ನು ಹೊಟ್ಟೆಬಾಕ ಚಾಪಲ್ಯವನ್ನು ಪೂರೈಸುವ ಬಗೆಯಲ್ಲಿ ತೀರಿಸಲು ನಾನು ಒಪ್ಪಲಾರೆ. ಆತ್ಮಯಜ್ಞಕ್ಕಿಂತಲೂ ಹಿರಿದಾದ ಯಜ್ಞವಿಲ್ಲ ಎಂದು ಗೀತೆಯ ಸಂದೇಶ ; ಜ್ಞಾನದಾನಕ್ಕಿಂತಲೂ ದಾನವಿಲ್ಲ ಎಂದು ಉಪನಿಷತ್ತಿನ ವಾಣಿ. ನನ್ನ ಪಿತೃಋಣವನ್ನು ಆತ್ಮಯಜ್ಞ, ಜ್ಞಾನದಾನಗಳಲ್ಲಿ ತೀರಿಸ ಬಾರದೇಕೆ? ಅನ್ನದಾನ ಶ್ರೇಷ್ಠವಾದದ್ದು - ಯಾರಿಗೆ ದಾನಮಾಡಬೇಕು ಅದಕ್ಕೆ ಪಾತ್ರರು ಯಾರು ? ತಿಂದು ತಿಂದು ಹಂದಿಗಳ ಹಾಗೆ ಬದುಕುವುದೇ ತಮ್ಮ ಜೀವನಧ್ಯೇಯವಾಗಿ ಉಳ್ಳ ವೈದಿಕ ಬ್ರಾಹ್ಮಣರೇ ಅಥವಾ ಅನ್ನ - ಅನ್ನವೆಂದು ಹಾತೊರೆಯುತ್ತಿರುವ ಬಡಬಗ್ಗರೆ ? ಅನ್ನವನ್ನೇ ನೀಡಬೇಕಾ ದರೆ ಯಾರಿಗೆ ಅದರ ನಿಜವಾದ ಆವಶ್ಯಕತೆಯಿದೆಯೋ, ಯಾರ ಹಸಿವು ಅದರಿಂದ ಅಣಗುತ್ತದೆಯೋ ಅವರಿಗೆ ನೀಡೋಣ. ಸತ್ತು ಸ್ವರ್ಗದ ದಾರಿ ಹಿಡಿದ ಪಿತೃಗಳು (ಅವರು ಹಾಗೆ ಹಿಡಿದಿದ್ದರೆ) ಜಾತಿಮತಗಳ ಅಂಧವೃತ್ತಿ ಗಳನ್ನವಲಂಬಿಸಿ ಬ್ರಾಹ್ಮಣರಿಗೇ ಅನ್ನ ಹಾಕಬೇಕೆಂದು ವಿಧಾಯಕ ಮಾಡಿದ್ದಾರೇನು ?

ಇದು ತತ್ವದ ಮುಖವಾಯಿತು. ಇನ್ನೂ ಆಚರಣೆಯ ಮುಖವನ್ನು ನೋಡೋಣ. ಶ್ರಾದ್ಧಗಳಲ್ಲಿ ನಂಬಿಕೆ ಹೋದದ್ದು ಆಚಾರ್ಯಪದವಿಗೆ

ಬಂದು ಕೂರುವ ಬ್ರಾಹ್ಮಣರ ಅವಿಚಾರದಿಂದ. ಒಮ್ಮೆ ನಮ್ಮ ಮನೆಯಲ್ಲಿ ಶ್ರಾದ್ಧ ಬಂತು. ಒಬ್ಬ ಬ್ರಾಹ್ಮಣ ಬಂದು ಬಾಳೆಯೆಲೆ ದೊನ್ನೆ ಮಾಡುವು ದಕ್ಕೆ ಕತ್ತರಿ ಬೇಕು ಎಂದ. ನನ್ನ ಹತ್ತಿರ ಸೊಗಸಾದ ರಾಜೇಶ್ರೀ (Rodgers) ಕತ್ತರಿ ಇತ್ತು. ಕೊಟ್ಟೆ, ಅವನು ದೊನ್ನೆ ಕತ್ತರಿಸಿ, ಹೋಗು ವಾಗ ಕತ್ತರಿಯನ್ನು ತನ್ನ ಮಂತ್ರಪುಸ್ತಕದೊಳಗೆ ಅಡಗಿಸಿಕೊಂಡು ಕತ್ತರಿಗೆ ಕತ್ತರಿ ಹಾಕೇಬಿಟ್ಟ. ನನ್ನ ಪಿತೃಗಳನ್ನು ಸ್ವರ್ಗದ ಗಾಡಿ ಹತ್ತಿಸಿದ ಚೀಫ್ ಗಾರ್ಡ್ ಇವನು.

ಮತ್ತೊಂದುಸಲ ಒಬ್ಬ ಬ್ರಾಹ್ಮಣ, ಮುತ್ತೈದೆ ಬಂದರು. ಅವರಲ್ಲಿ ಒಂದು ಒಪ್ಪಂದವಾಗಿತ್ತು. ಬ್ರಾಹ್ಮಣನ ಹೆಂಡತಿ ಅಕಸ್ಮಾತ್ತಾಗಿ ಮುಟ್ಟಾದುದರಿಂದ ಅವನು ಒಬ್ಬಳು ಬಾಡಿಗೆ ಮುತ್ತೈದೆಯನ್ನು ಕರೆ ತಂದಿದ್ದ. ಊಟ, ದಕ್ಷಿಣೆ, ಮುತ್ತೈದೆಗೆ. ಸೀರೆ ಕುಪ್ಪಸ ಬ್ರಾಹ್ಮಣನಿಗೆ ಎಂದು ಅವರಲ್ಲಿ ಕರಾರಾಗಿತ್ತು. ಮುತ್ತೈದೆ ಊಟ ಹೊಡೆದು ದಕ್ಷಿಣೆ ಯನ್ನು ಸೊಂಟಕ್ಕೆ ಸಿಕ್ಕಿಸಿಕೊಂಡಳು. ಸೀರೆಯ ಮಾತಿಗೆ ಜಗಳಬಿತ್ತು. ತಾ ಎಂದ ಅವನು, ಕೊಡುವುದಿಲ್ಲ ಎಂದಳು ಅವಳು. ಈ ವ್ಯಾಪಾರಿ ಷರತ್ತುಗಳನ್ನು ಮೀರಿ ಪಿತೃಗಳು ಸ್ವರ್ಗವಾಸಿಗಳಾಗಬೇಕಾಗಿದೆ.

ಇಂತಹ ಅವಿಚಾರ, ಅನ್ಯಾಯ ಬ್ರಾಹ್ಮಣಸಮಾಜದಲ್ಲಿ ಮೂಡಿದ್ದ ರಿಂದಲೇ ಅದು ಯಥೋಭ್ರಷ್ಟ ತಥೋಭ್ರಷ್ಟ ಪದವಿಗೆ ಬಂದಿರುವುದು.

ನಮಗಿಂದು ಬೇಕಾದದ್ದು ಶ್ರಾದ್ಧವಲ್ಲ, ಬಾಳು. ಸತ್ತಮೇಲೆ ಸ್ವರ್ಗ ವಲ್ಲ, ಇರುವಾಗ ನಾಕ. ನಮ್ಮ ಪಿತೃಗಳಿಗೆ ಬೇಕಾದದ್ದು ವಡೆ ಪಾಯಿಸ ವಲ್ಲ, ತಮ್ಮ ಚಿರಂಜೀವಿಗಳ ಕಲ್ಯಾಣ - ಅವರು ಮನುಷ್ಯರಾಗಿ ಆತ್ಮಾಭಿ ಮಾನಿಗಳಾಗಿ ವಿಚಾರಪರರಾಗಿ ಬಾಳಬೇಕೆಂಬ ಆಸೆ.

———

## ೭. ದೊಡ್ಡ ಮನುಷ್ಯ

ನಾವು ರೂಢಿಯಲ್ಲಿ ಉಪಯೋಗಿಸುವ 'ದೊಡ್ಡಮನುಷ್ಯ' - 'ದೊಡ್ಡಸ್ತಿಕೆ' ಶಬ್ದಗಳ ಅರ್ಥ ಸರಿಯಾಗಿ ತಿಳಿದುಕೊಂಡಿಲ್ಲವೆಂದು ನನ್ನ ಭಾವನೆ. ತಿಳಿದುಕೊಳ್ಳುವುದಕ್ಕೂ ಪ್ರಯತ್ನಿಸಿಲ್ಲ.

ಸಾಮಾನ್ಯವಾಗಿ ಸರ್ಕಾರಿ ಅಧಿಕಾರಿಗಳು, ಶ್ರೀಮಂತರು ಇವರನ್ನು ಕುರಿತು ಮಾತನಾಡುವಾಗ 'ದೊಡ್ಡಮನುಷ್ಯ' ಎಂಬ ವಿಶೇಷಣ ಹಚ್ಚುತ್ತೇವೆ. ಉದಾರಿ, ತ್ಯಾಗಿ, ದೇಶಪ್ರೇಮಿ ಇವರ ಬಗ್ಗೆ ಮಾತನಾಡುವಾಗಲೂ ಒಂದೊಂದು ಸಲ ಈ ವಿಶೇಷಣ ಹಚ್ಚುತ್ತೇವೆ.

ಶಬ್ದಾರ್ಥವನ್ನೇ ಲಕ್ಷ್ಯದಲ್ಲಿಟ್ಟುಕೊಂಡರೆ ಕೀರ್ತಿಶೇಷ ಮೌಲಾನಾ ಷೌಕುತ್ತಲ್ಲಿ, ಕಿಂಗ್‌ಕಾಂಗ್ ಪ್ರಮಾಣದ ಜನರನ್ನು ದೊಡ್ಡಮನುಷ್ಯರೆಂದು ಕರೆಯಬೇಕಾಗುತ್ತದೆ. ಅಂದರೆ ಇಲ್ಲಿ 'ದೊಡ್ಡ' ಶಬ್ದಕ್ಕೆ 'ಎತ್ತರ'ವೆನ್ನುವ ಅರ್ಥ ಕೊಟ್ಟಹಾಗಾಯಿತು.

'ದೊಡ್ಡ' ಶಬ್ದವನ್ನು ಗಾತ್ರ, ಪ್ರಮಾಣಗಳ ಅರ್ಥದಲ್ಲಿ ನಾವು ಉಪಯೋಗಿಸಿದರೂ 'ದೊಡ್ಡಮನುಷ್ಯ' ಎನ್ನುವಾಗ ವಿಶೇಷಾರ್ಥ ಕೊಡುತ್ತೇವೆ. ಯಾವದಾದರೂ ಒಂದು ಗುಣದಲ್ಲಿ ಮಿಕ್ಕವರಿಗಿಂತಲೂ ಮುಂದಿರುವವರನ್ನು ದೊಡ್ಡವನೆಂದು ಕರೆಯಬೇಕಾಗುತ್ತದೆ. ತಡಾಕಿ ಮಲ್ಲಪ್ಪ ದೊಡ್ಡ ಜಟ್ಟಿ, ಮನ್‌ಸೂರ್ ಮಲ್ಲಿಕಾರ್ಜುನ ದೊಡ್ಡ ಗಾಯಕ, ಬಿ. ಎಂ. ಶ್ರೀ ದೊಡ್ಡ ವ್ಯಾಖ್ಯಾತರು, ಕುಕ್ಕೆ ಸುಬ್ರಹ್ಮಣ್ಯ ಶಾಸ್ತ್ರಿಗಳು ದೊಡ್ಡ ವಿದ್ವಾಂಸರು ಎಂದು ಹೇಳುತ್ತೇವೆ.

ಯಾವ ವಿಶೇಷ ಗುಣವನ್ನೂ ಪಡೆಯದೆ ಈ ವಿಶೇಷಣವನ್ನು ಸ್ವಾಹಾ ಮಾಡಿರುವವರು ಸರ್ಕಾರಿ ಅಧಿಕಾರಿಗಳು ಮತ್ತು ಶ್ರೀಮಂತರು. ಸರ್ಕಾರಿ ಅಧಿಕಾರಿಗಳು ಮತ್ತು ಶ್ರೀಮಂತರ ತಲೆಯ ಮೇಲೆ ಮೂರಂಗಲ ಗುನ್ನಂ ಪಟ್ಟಿ ರುಮಾಲಿದೆಯೆಂದು ದೊಡ್ಡಮನುಷ್ಯರೆನ್ನೋಣವೇ ? ಈಗ ಅಗಸರು, ನಾಯಿಂದರು, ಮುದ್ರಣಾಲಯಗಳ ಮಾಲಿಕರು ಕೂಡ ಗುನ್ನಂಪಟ್ಟಿ ರುಮಾಲು ಧರಿಸುತ್ತಾರೆ. ನರ್ತಕಿಯರ ಹಿಂದೆ 'ಪಿನ್‌ಪಾಟ್' ಹಾಡುವ ಯಜಮಾನರು ದೊಡ್ಡ ಗುನ್ನಂಪಟ್ಟಿ ರುಮಾಲುಗಳನ್ನು ಧರಿಸುತ್ತಾರೆ. ಇವರೆಲ್ಲರನ್ನೂ ದೊಡ್ಡಮನುಷ್ಯರ ವರ್ಗಕ್ಕೆ ಸೇರಿಸಬೇಕಾಗುತ್ತದೆ. ನಮ್ಮ ಅಭ್ಯಂತರವೇನೂ ಇಲ್ಲ - ಆದರೆ ಸಮಾಜ ಸಿದ್ಧವಾಗಿಯೇ ?

ಇನ್ನು ಸರ್ಕಾರಿ ಅಧಿಕಾರಿಗಳಲ್ಲಿ ತ್ಯಾಗ ಔದಾರ್ಯಾದಿ ಗುಣಗಳಿವೆ ಯೆಂದೇ ? ಆ ಪದಗಳಿಗೆ ಅವರ ಶಬ್ದಕೋಶದಲ್ಲಿ ಸ್ಥಾನವಿಲ್ಲವೆಂಬುದು ಲೋಕವಿದಿತ. ಸಾಕ್ಷಿ ಬೇಕಾದರೆ ಅವರ ಮನೆಗಳಿಗೆ ಹಾಲು, ತರಕಾರಿ, ಮೊಸರು, ಹಿಂದೂ ಪೇಪರ್ ಕೊಡುವವರನ್ನು ಕೇಳಿನೋಡಿ. ಚಂದಾ ಪಟ್ಟಿಗಳನ್ನು ತೆಗೆದುಕೊಂಡು ಹೋಗುವ ಸಂಸ್ಥೆಗಳವರನ್ನು ಕೇಳಿನೋಡಿ. ವಾರಾನ್ನ, ಭಿಕ್ಷಾನ್ನ ಮಾಡಿಕೊಂಡು ಶಾಲೆಗೆ ಹೋಗುವ ಬಡ ವಿದ್ಯಾರ್ಥಿ ಗಳನ್ನು ಕೇಳಿನೋಡಿ.

ಶ್ರೀಮಂತ ಶಬ್ದಕ್ಕೆ ಸಮಾನಾರ್ಥ ಪದ 'ಕಾಳಸಂತೆ'. ಕಾಳ ಸಂತೆಯ 'ಕರ್ಬೋಗಿ'ಯ ಬೇಗೆಯಲ್ಲಿ ಬೆಂದ ಜನಕ್ಕೆ ಶ್ರೀಮಂತರ ರೀತಿ ನೀತಿಗಳನ್ನು ತಿಳಿಯಹೇಳುವುದು ಕನ್ನಂಬಾಡಿಗೆ ನೀರು ಹೊತ್ತಹಾಗೆ.

ದೊಡ್ಡಮನುಷ್ಯ ಶಬ್ದದ ವ್ಯಾಪ್ತಿ ನಿಜವಾಗಿ ಬಹಳ ಸಂಕುಚಿತ ವಾದುದು. ಇದು ರಾವ್‌ಬಹದ್ದೂರ್, ರಾಜಸೇವಾಪ್ರಸಕ್ತ ಪ್ರಶಸ್ತಿ ಗಳಷ್ಟು ಅಗ್ಗವಾದುದಲ್ಲ. ಈ ಶಬ್ದವನ್ನು ನಾವು ಬಹಳ ಎಚ್ಚರದಿಂದ ಬಳಸಬೇಕು. ವಿಜಾಪುರದ ಬರಗಾಲದ ಕಾಲದಲ್ಲಿ ಅಲ್ಲಿನ ಜನತೆಗೆ ಆಹಾರ, ವಾಹನ ಸೌಕರ್ಯಾದಿಗಳನ್ನುಂಟುಮಾಡಿಕೊಟ್ಟ ಗದುಗಿನ ಬಸುರಿಗಿಡದ ವೀರಪ್ಪನವರನ್ನು ದೊಡ್ಡಮನುಷ್ಯರೆನ್ನಬಹುದು, ಕಾಂಗ್ರೆಸ್ಸಿಗೆ ತಮ್ಮ ಸರ್ವಸ್ವವನ್ನೂ ತ್ಯಾಗಮಾಡಿದ ಕಾರ್ನಾಡು ಸದಾಶಿವ ರಾಯರನ್ನು ದೊಡ್ಡಮನುಷ್ಯರೆನ್ನಬಹುದು, ಪ್ರತಿಫಲಾಪೇಕ್ಷೆಯಿಲ್ಲದೆ

ಸಾಹಿತ್ಯಸೇವೆ ಮಾಡುತ್ತಿರುವ ಆಲೂರ ವೆಂಕಟರಾಯರು, ಚನ್ನಪ್ಪ ಉತ್ತಂಗಿಯವರನ್ನೂ ದೊಡ್ಡಮನುಷ್ಯರೆನ್ನಬಹುದು. ಸುಮ್ಮಸುಮ್ಮನೆ ಎಲ್ಲರಿಗೂ ಉಪಯೋಗಿಸುವುದಕ್ಕೆ ಈ ಶಬ್ದವೇನು 'ಬೀದಿವರೆಯೆ, ಗೊರವರ ದುಂಡುಚಿಯೆ, ಬೀರನ ಕತೆಯೇ?'

ಈಗ ದೊಡ್ಡಮನುಷ್ಯರೆನಿಸಿಕೊಂಡಿರುವವರು ಹೇಗೆ ಆ ಹೆಸರನ್ನು ಗಳಿಸಿದರು ಎಂದು ನೋಡಿದರೆ ಯುಕ್ತಾಯುಕ್ತ ವಿವೇಚನೆಗೆ ಅನುಕೂಲವಾದೀತು.

ಎಲ್ಲಕ್ಕೂ ಹೆಚ್ಚಿನದು ಹಣ. 'ದುಡ್ಡೇ ದೊಡ್ಡಪ್ಪ, ರೊಕ್ಕವೇ ಚಿಕ್ಕಪ್ಪ.' ಯಾವ ರೀತಿಯಲ್ಲಾದರೂ ಹಣ ಸಂಗ್ರಹಿಸಿದರೆ ಆಯಿತು. ಚಕ್ರಬಡ್ಡಿಗೆ ಚಕ್ರಬಡ್ಡಿ ಸೇರಿಸಿದರೂ ಸರಿ, ಕಾಳಸಂತೆಯಲ್ಲಿ ರೂಪಾಯಿಗೆ ಒಂದುಸೇರು ಅಕ್ಕಿ, ಜೋಳ ಮಾರಿದರೂ ಸರಿ ಬ್ಯಾಂಕಿನಲ್ಲಿ ಉಳಿತಾಯ ಪಟ್ಟಿಯನ್ನು ಬೆಳಸಬೇಕು. ಹಣವಿಲ್ಲದಿದ್ದರೆ ಅಧಿಕಾರವಾದರೂ ಇರಬೇಕು. ಹನ್ನೆರಡು ರೂಪಾಯಿ ಕನಿಷ್ಠಬಿಲ್ಲೆ ಇಡೀ ಸಂಸ್ಥಾನದ ಅಧಿಕಾರ ತಾನೇ ನಡಸುತ್ತಿರುವಂತೆ ವರ್ತಿಸಬಲ್ಲ. ರೇಷನ್ ಕಛೇರಿಗಳಲ್ಲಿ ಕೆಲಸಕ್ಕಿದ್ದರಂತೂ ಮುಗಿದೇಹೋಯಿತು - ಹಿಟ್ಲರಶಾಹಿ ಅವರ ಮುಂದೆ ನಡುಗಿಹೋಗುತ್ತದೆ.

ಇದು ಯಾವದೂ ಸಾಧ್ಯವಿಲ್ಲದಿದ್ದರೂ ದೊಡ್ಡಮನುಷ್ಯರಾಗಬಹುದು. ಮನುಷ್ಯ ದೊಡ್ಡವನಾಗಿಯೇ ಇರಬೇಕೆಂದೇನೂ ಕಡ್ಡಾಯವಿಲ್ಲ, ದೊಡ್ಡಮನುಷ್ಯನ ಹಾಗೆ ತೋರಿಸಿಕೊಳ್ಳುವ ಕಲೆಯನ್ನು ಸಾಧಿಸಬೇಕು. ಕಾಣುವುದಕ್ಕೆ ಮನೆಗೆ ಬರುವವರನ್ನು ಹೊರಗೆ ಅರ್ಧಗಂಟೆ ಕಾಯಿಸಬೇಕು. ಆಹ್ವಾನ ಕೊಡುವವರ ಮುಂದೆ ನೂರೆಂಟು 'ಎಂಗೇಜ್‌ಮೆಂಟ್' ಸಬೂಬು ಹೇಳಬೇಕು. ಸಭೆಗಳಿಗೆ ಹೋದರೆ ಮೊವಲ ಪಂಕ್ತಿ ಕುರ್ಚಿಯಲ್ಲಿಯೇ ಕೂಡಬೇಕು. ಕುರ್ಚಿ ತೆರವಿಲ್ಲದಿದ್ದರೆ ಸಂಸ್ಥೆಯವರು ಬೇರೆ ಕುರ್ಚಿ ತಂದು ಹಾಕುವ ತನಕ ನಿಂತೇ ಇರಬೇಕು. ಸಮಯಕ್ಕೆ ಮುಂಚೆ ಅಥವಾ ಸರಿಯಾಗಿ ಹೋದರೆ ಜನರ ಗಮನ ಬೀಳುವುದಿಲ್ಲ. ಆದ್ದರಿಂದ ಸ್ವಲ್ಪ ತಡವಾಗಿ ಹೋಗಿ, ಕುರ್ಚಿಗೆ ತಡಕಾಡಿ ಎಲ್ಲರ ಗಮನವನ್ನೂ ಸೆಳೆಯಬೇಕು.

ಸಾರ್ವಜನಿಕ ಜೀವನದಲ್ಲಿ ದೊಡ್ಡಮನುಷ್ಯನಾಗುವುದಕ್ಕೆ ಕೆಲವು

ಸುಲಭೋಪಾಯಗಳಿವೆ. ಮುಂದಿರುವ ಪಕ್ಷದ ಜತೆ ಸೇರಿಕೊಳ್ಳುವುದು, ಇಲ್ಲಿದಿದ್ದರೆ ತೀವ್ರವಾಗಿ ಖಂಡಿಸುವುದು. ಪ್ರತಿನಿತ್ಯ ತಪ್ಪದೆ ೮-೧೦ ಕಾರ್ಬನ್ ಕಾಪಿ ತೆಗೆಸಿ ವೃತ್ತ ಪತ್ರಿಕೆಗಳಿಗೆ 'ಸ್ಟೇಟ್‌ಮೆಂಟ್ಸ್' (ಹೇಳಿಕೆ) ಗಳನ್ನು ಕೊಡುವುದು. ಹಿಂದೂ, ಎಕ್ಸ್‌ಪ್ರೆಸ್, ಟೈಮ್ಸ್ ಆಫ್ ಇಂಡಿಯಾ ಪತ್ರಿಕೆಗಳ ಪ್ರತಿನಿಧಿಗಳ ಕೈಕಾಲು ಹಿಡಿದು ಅವರು 'ಇಂಟರ್‌ವ್ಯೂ' ತೆಗೆದುಕೊಳ್ಳುವ ಹಾಗೆ ಮಾಡುವುದು. ಉಪನ್ಯಾಸಕ್ಕೆ ಕರೆದರೆ 'ಸಾಧ್ಯವಿಲ್ಲ. ಬೇಕಾದರೆ ಅಧ್ಯಕ್ಷನಾಗುತ್ತೇನೆ' ಎಂದು ಹೇಳುವುದು. ತಮ್ಮನ್ನು ಉಪನ್ಯಾಸಕ ಅಥವಾ ಅಧ್ಯಕ್ಷ ಮಾಡದಿರುವ ಸಭೆಗಳನ್ನು ಬಹಿಷ್ಕರಿಸುವುದು.

ದೊಡ್ಡ ಮನುಷ್ಯನಾಗುವುದಕ್ಕಿಂತ, ಹಾಗೆ ತೋರಿಸಿಕೊಳ್ಳುವುದು ಕಷ್ಟ. ಅದೊಂದು ಯೋಗ. ಅದಕ್ಕೆ ಸಾಧನೆ ಬೇಕು. ಒಂದುಸಲ ಪಾಲ್ ರಿಚರ್ಡ್ಸ್ ಐಗುಪ್ತದ 'ಪಿರಮಿಡ್'ಗಳನ್ನು ನೋಡಲು ಹೋದರಂತೆ. ಆರಡಿ ಎತ್ತರದ ಆಳು ಬಾಗಿಲಲ್ಲಿ ಕೊಡಬೇಕಾದ ಶುಲ್ಕ ಕೊಡದೆ ಒಳಗೆ ಹೋಗಲೆತ್ನಿಸುತ್ತಿದ್ದರು ರಿಚರ್ಡ್ಸ್. ದ್ವಾರಪಾಲಕ ಶುಲ್ಕ ಬೇಡಿದ. ಪಾಲ್ ಅವನನ್ನು ಆಪಾದಮಸ್ತಕ ನೋಡಿ 'ನನ್ನ ಶುಲ್ಕ ಕೇಳುವೆಯಾ. ನಾನು ಯಾರು ಗೊತ್ತೇ – ಪಾಲ್ ರಿಚರ್ಡ್ಸ್' ಎಂದು ಒದರಿ ಒಳಗೆ ಹೋದರಂತೆ. ದ್ವಾರಪಾಲಕ ನಿರುತ್ತರನಾದನಂತೆ.

ಇವು ಯಾವವೂ ಸಾಧ್ಯವಿಲ್ಲದಿದ್ದರೆ ತುರ್ತಿಗೆ ಒಂದು ಸುಲಭಮಾರ್ಗವಿದೆ. ದೇಶದ ವಿಚಾರಲಹರಿಯನ್ನು ಹೊಡೆದೆಬ್ಬಿಸುತ್ತಿರುವ ಪ್ರಗತಿಶೀಲರನ್ನು ನಿಂದಿಸಿಕೊಂಡು ಬ್ಯಾಡಿಗಿ, ಹಾವೇರಿ, ಕೊಳ್ಳೇಗಾಲ, ಮಲ್ಪೆ, ಚಂಡಿಯೆ, ಕ್ಯಾತ್ಸಂದ್ರ ಪ್ರವಾಸಮಾಡಿದರಾಯಿತು. 'ದೊಡ್ಡಮನುಷ್ಯತ್ವ' ಕಟ್ಟಿಟ್ಟ ಮುಡಿಪು.

---

## ೮. ಮೀಸೆ

ಪ್ರಕೃತಿ ಒಂದೊಂದು ಪ್ರಾಣಿಗೆ ಒಂದೊಂದು ಅಂಗದಲ್ಲಿ ಚೇತನ ತುಂಬಿದೆ. ಜಿಂಕೆಯ ಕಣ್ಣು, ಕಾಲು; ಎತ್ತಿನ ಕೊಂಬು; ಹುಲಿಯ ಉಗುರು; ಬೆಕ್ಕಿನ ಮೀಸೆ. ಪ್ರಾಣಿಗಳ ಆ ಸೂಕ್ಷ್ಮೇಂದ್ರಿಯಗಳನ್ನು ಹಿಂಸಿಸಿದರೆ ಅವಕ್ಕೆ ತುಂಬ ಕೋಪ. ಬೆಕ್ಕು ಬಡಿಸಿಕೊಂಡು ಸುಮ್ಮನಿರುತ್ತದೆ, ಹೊಟ್ಟೆಗೆ ಹಾಕದೆ ಓಡಿಸಿದರೆ ಸುಮ್ಮನಿರುತ್ತದೆ. ಆದರೆ ಅದರ ಮೀಸೆ ಬೋಳಿಸಿದರೆ ಮುಗಿಯಿತು. ಅದರ ಅವತಾರವನ್ನೇ ಮುಗಿಸಿದ ಹಾಗಾಗುತ್ತದೆ.

ಮನುಷ್ಯನಿಗೂ ಪ್ರಾಣಿಗಳಿಗೂ ಇರುವ ಮುಖ್ಯ ವ್ಯತ್ಯಾಸ - ಅವುಗಳಿಗೆ ಒಂದೊಂದು ಇಂದ್ರಿಯ ಪ್ರಬಲವಾಗಿದ್ದರೆ ಅವನಿಗೆ ಎಲ್ಲ ಇಂದ್ರಿಯಗಳೂ ಪ್ರಬಲವಾಗಿರುತ್ತವೆ. ಮನುಷ್ಯ ಬೆಕ್ಕಿನ ಹಾಗೆ ಮೀಸೆಯ ಸಹಾಯದಿಂದ ದಾರಿಮಾಡಿಕೊಂಡು ಇರುಳು ಸಂಚರಿಸಬೇಕಾಗಿಲ್ಲ. ಮೀಸೆಯಿಲ್ಲದಿದ್ದರೆ ಬೆಕ್ಕು ಬಾಳುವುದಕ್ಕೇ ಸಾಧ್ಯವಿಲ್ಲ. ಆದರೆ ಮನುಷ್ಯನ ಸ್ಥಿತಿ ಹಾಗಲ್ಲ. ಮೀಸೆ ಮನುಷ್ಯನ ಬಾಳಿಗೆ ಕೇವಲ ಅಗತ್ಯವಾದ ವಸ್ತುವಲ್ಲದಿರುವಾಗ ಅವನು ಮೀಸೆ ಬಿಡುವುದೇತಕ್ಕೆ ? ಇದೊಂದು ದೊಡ್ಡ ಸಮಸ್ಯೆ !

ಮನುಷ್ಯ ಕಾಡುಪ್ರಾಣಿಯಾಗಿದ್ದಾಗ ಅವನಿಗೆ ಕ್ಷೌರಕಲೆಯ ಪರಿಚಯವಿರಲಿಲ್ಲ. ಗೊರಿಲ್ಲಾಗಳ ಹಾಗೆ ಮುಖ ಮೈಯೆಲ್ಲ ಕೂದಲು ತುಂಬಿಕೊಂಡಿರುತ್ತಿತ್ತು. ಅರಣ್ಯವಾಸಿಯಾಗಿ, ದುಷ್ಟಮೃಗಗಳ ಸಂಪರ್ಕದಲ್ಲಿ ಅವನು ಬಾಳಬೇಕಾಗಿದ್ದುದರಿಂದ ಅವನು ಕೂದಲುಮರೆಹೊಗುತ್ತಿದ್ದ.

ಪ್ರಾಣಿಗಳಿಗೆ ' ಕೆಮೂಫ್ಲಾಜ್ ' (Camouflage) ಮಾಡುವುದಕ್ಕೆ ಕೂದಲು ತುಂಬ ನೆರವಾಗುತ್ತಿತ್ತು. ಅಲ್ಲಿಂದ ಮುಂದೆ ತಲೆಬೋಳಿಸಿಕೊಂಡು ಗಡ್ಡ ಬೆಳಸುವ ಪದ್ಧತಿ ಆರಂಭವಾಯಿತು. ಭಾರತದಲ್ಲಿ ಗಡ್ಡದ ಜತೆ ಮೀಸೆಯೂ ಇರುತ್ತಿತ್ತು, ಅರಬದೇಶದಲ್ಲಿ ಮೀಸೆಯಿಲ್ಲದೆ ಗಡ್ಡ ಬೆಳಸುತ್ತಿದ್ದರು. ಗಡ್ಡಕ್ಕೆ ಧರ್ಮದ ಬಣ್ಣವೂ ಬಂತು. ನಾಗರಿಕತೆ ಬೆಳದಂತೆ ಗಡ್ಡದ ಆಕಾರ ಮತ್ತು ಪ್ರಮಾಣ ಹೆಚ್ಚುಕಡಿಮೆಯಾಗುತ್ತ ಬಂತು.

ಮೀಸೆಯ ಬೆಳವಳಿಗೆ, ಉತ್ಕ್ರಾಂತಿ, ಕ್ರಾಂತಿ ಇತಿಹಾಸವನ್ನು ನೋಡಿದರೆ ಜಗತ್ತಿನ ಸಾಮಾಜಿಕ ಚರಿತ್ರೆಯನ್ನು ಬರೆಯಬಹುದು. ಕ್ಷಾತ್ರ ಯುಗದಲ್ಲಿ ಮೀಸೆ ರುದ್ರಸ್ವರೂಪವನ್ನು ತಳೆದು ನಿಂತಿತು. ಹುರಿಮೀಸೆ ಯನ್ನು ಕಂಡ ಅರಿರಾಯರ ಎದೆ ನುಚ್ಚುನೂರಾಗುತ್ತಿತ್ತು. ಮೀಸೆ ಕಾಯಕದಲ್ಲಿ ನಿಷ್ಣಾತರಾದವರನ್ನು ಅರಸರು, ವೀರರು, ಶ್ರೀಮಂತರು ಮೀಸೆ ಹುರಿಮಾಡುವುದಕ್ಕೆ ಇಟ್ಟುಕೊಳ್ಳುತ್ತಿದ್ದರು. ' ಅಂಬಲಿ ಕುಡಿಯು ವವನಿಗೆ ಮೀಸೆ ತಿಕ್ಕುವನೊಬ್ಬ' ಎನ್ನುವ ನಾಣ್ಣುಡಿ ಈ ಸಂಸ್ಕೃತಿಯ ಅವಸಾನಕಾಲದಲ್ಲಿ ಹುಟ್ಟಿದುದೆಂದು ಸ್ವತಸ್ಸಿದ್ಧವಾಗುತ್ತದೆ. ' ಜಟ್ಟಿ ಬಿದ್ದರೂ ಮೀಸೆ ಮಣ್ಣಾಗಲಿಲ್ಲ' ಎಂಬ ನಾಣ್ಣುಡಿ ಮೀಸೆ ಸಂಸ್ಕೃತಿಯ ಉಚ್ಚದೆಸೆಯನ್ನು ತೋರುತ್ತದೆ.

ಕಾಲ ಬದಲಾದಂತೆ, ಇತಿಹಾಸ ವ್ಯತ್ಯಾಸಗೊಂಡಂತೆ ಮೀಸೆಯ ರೂಪಲಾವಣ್ಯವೂ ಬದಲಾಯಿಸಿತು. ಮುಮ್ಮಡಿ ಕೃಷ್ಣರಾಜವೊಡೆಯ ರವರ ಕಾಲಕ್ಕೆ ಮೀಸೆ ತನ್ನ ಕೊನೆಯ ವೈಭವವನ್ನು ಕಂಡಿತು. ಮೇಲ್ತುಟಿಯ ಮೇಲೆ ದಟ್ಟವಾಗಿ ನೀಳವಾಗಿ ಬಂದು, ಕೆನ್ನೆಗಳ ಮೇಲೆ ತಿರುವಿಕೊಂಡು, ಗೊಂಡೆಯ ಹಾಗೆ ಕೂಡುವ ಮೀಸೆ ಆಗ ಬಹಳ ಪ್ರಸಿದ್ಧ ವಾಗಿತ್ತು. ಒಂದೊಂದು ಗೊಂಡೆಯ ಮೇಲೆ ಒಂದೊಂದು ಗಜನಿಂಬೆ ಯನ್ನು ನಿಲ್ಲಿಸಿ ಕುಣಿಸುತ್ತಿದ್ದರು ಆಗಿನ ಜನ.

ಜನತೆಯ ಜೀವನದಲ್ಲಿ ಕಸು ಕಡಿಮೆಯಾಗುತ್ತ ಬಂದ ಹಾಗೆ ಮೀಸೆಯ ಪ್ರಮಾಣವೂ ಕಡಿಮೆಯಾಗುತ್ತ ಬಂತು. ಮುಮ್ಮಡಿಯವರ ' ಗಿರಿಜಾಮೀಸೆ ' ಫ್ರೆಂಚ್‌ಕಟ್‌ಗೆ ದಾರಿಮಾಡಿಕೊಟ್ಟಿತು. ಜನ ಕಡ್ಡಿ ಮೀಸೆ, ನಶ್ಯದ ಮೀಸೆಗಳಿಗೆ ಮನತೆತ್ತರು. ಈಗಲೂ ಉತ್ತರಕರ್ನಾಟಕದ

ಹಿರಿಯ ಜನ 'ಪರಕೆಮೀಸೆ'ಯನ್ನು ಬಿಡಿಸುತ್ತಾರೆ. ಅವರ ಆರೋಗ್ಯ ಚೆನ್ನಾಗಿರಲು ಇದೂ ಒಂದು ಕಾರಣ.

ಕಾಲೇಜಿನ ತರುಣವಿದ್ಯಾರ್ಥಿಗಳಿಗೆ ಫ್ರೆಂಚ್‌ಕಟ್ (ನೊಣಮೀಸೆ) ಮೇಲೆ ಬಹಳ ವಿಶ್ವಾಸ. ಅವರ ಗೆಳೆಯರು ಮೂಗಿನ ಕೆಳಗೆ ನೊಣ ಕುಳಿತಿದೆಯೆಂದು ಓಡಿಸಲು ಹೋದ ಪ್ರಸಂಗಗಳೂ ಉಂಟು. ಕಾಲೇಜಿನ ತರುಣರಲ್ಲಿ ತನ್ನ ಮೀಸೆಯ ಪ್ರಭಾವವನ್ನು ಮೂಡಿದವನು ಪ್ರಸಿದ್ಧ ಸಿನಿಮಾ ನಟ ರೊನಾಲ್ಡ್ ಕೋಲ್ಮನ್. ಮೇಲ್ದುಟಿಯ ಮೇಲೆ ಸ್ವಲ್ಪ ಹೆಚ್ಚುಹೆಚ್ಚಾಗಿ ತುಟಿಯಂಚಿಗೆ ಬರುಬರುತ್ತ ಕ್ಷಯಿಸುವ ಮೀಸೆಯ ಪ್ರವರ್ತಕ ಕೊಲ್ಮನ್. ಇದರ ರಕ್ಷಣೆ ಪೋಷಣೆಗಾಗಿ ಮ್ಯಾಕ್ಸ್ ಫಾಕ್ಟರ್ ಕಂಪೆನಿಯವರ ಅನೇಕ ಸಾಮಗ್ರಿಗಳು ತರುಣರ ನಿತ್ಯವಿಧಿಗೆ ಸೇರಿರುತ್ತವೆ. ಆಧುನಿಕರು ಎಷ್ಟು ಪ್ರಯತ್ನಿಸಿದರೂ ಮೀಸೆಗೆ ಹಿಂದಿದ್ದ ಘನತೆ ತರಲು ಸಾಧ್ಯವಾಗಿಲ್ಲ. ಅವರು ಒಪ್ಪಿಕೊಳ್ಳಬೇಕಾದ ಸೋಲಿದು.

'ಗಂಡಸಿಗೆ ಮೀಸೆ ಶೋಭಾಯಮಾನ, ಹೆಂಗಸಿಗೆ ಮುಂದಲೆ ಶೋಭಾಯಮಾನ' ಎಂದ ನಾಣ್ಣುಡಿಕಾರ. ಈ ಮಾತು ಇಂದು ಅರ್ಥ ಹೀನವಾಗಿದೆ. ನೃತ್ಯಕಾರ ಉದಯಶಂಕರ ಅಮೇರಿಕೆಯಲ್ಲಿ ಕುಣಿದು ಬಂದ ಮೇಲೆ ನಮ್ಮ ದೇಶದಲ್ಲಿ ಆರಂಭವಾದ ನಾಟ್ಯಚಟವೂ (Dance revivals) ಕಾರಣಗಳಲ್ಲಿ ಒಂದು. ಗಂಡುಹುಡುಗರು ಬೇಲೂರಿನ ಶಿಲಾ ಬಾಲಿಕೆಯರಂತೆ ಬಳುಕಲಾರಂಭಿಸಿದರು. ಹೆಣ್ಣುಮುಖದ, ಉದ್ದನೆಯ ಕೂದಲಿನವ ಯಾರು ಸಿಕ್ಕಿದರೂ 'ಅಗೋ ಅವನೊಬ್ಬ ಕುಣಿಯುವವ' ಎಂದು ಬೆರಳುಮಾಡಿ ತೋರಿಸುವಷ್ಟು ಈ ಪ್ರಮೀಳಾಸೈನ್ಯ ಬೆಳದಿದೆ. ಗಂಡುಹುಡುಗರು ಹೆಣ್ಣುಹುಡುಗರಂತೆ ಕಾಣಲಾರಂಭಿಸಿದ ಮೇಲೆ ಸಮಾನ ಹಕ್ಕುಬಾಧ್ಯತೆಗಳನ್ನು ಕೇಳುವ ಹೆಂಗಸರು ಸುಮ್ಮನಿದ್ದಾರೆಯೇ? ಎಷ್ಟೋ ಜನ ಹೆಂಗಸರು ಅರಿಶಿನದ ಉಪಯೋಗ ತೊರೆಯುತ್ತ ಬಂದರು. ಜಿಲೆಟ್ ಸೇಫ್ಟಿಯ ಉಪಯೋಗ ಕಲಿತರು. ಸೊಗಸಾಗಿ ಮೀಸೆ ಬೆಳಸಲಾರಂಭಿಸಿದರು. ಮೀಸೆ, ಸೀರೆ ಕೂಡುವುದಿಲ್ಲ; ಚಿಂತೆಯಿಲ್ಲ. ಕಣ್ಣು ನಾಲ್ಕು ದಿವಸ ಅದೇ ನೋಟ ನೋಡಿ ಹೊಂದಿಕೊಳ್ಳುತ್ತದೆ. ರೂಢಿಗಿಂತಲೂ ಪ್ರಬಲ ದೇವತೆಯುಂಟೇ?

ಮಿಾಸೆಯ ಸರ್ವಸ್ವವನ್ನೂ ಅಪಹರಿಸಿ, ಅದನ್ನು ನಿಷ್ಕಾರಣವಾಗಿ ಪರಿತ್ಯಜಿಸಿದ ಪುರುಷವರ್ಗದ ಮೇಲೆ ಮಿಾಸೆ ಕೋಪಗೊಂಡಿದೆ. ಕಲ್ಲು ಮನಸ್ಸಿನ ಈ ಜನತೆಯ ಸಹವಾಸವೇ ಬೇಡವೆಂದೇ ಕರುಣಾಮಯರೂ, ಕೋಮಲಹೃದಯರೂ ಆದ ಹೆಂಗಸರನ್ನು ಆಶ್ರಯಿಸಿದೆ.

ಏನೇ ಆಗಲಿ! ಮಿಾಸೆಗೆ ಪರಾಜಯವಿಲ್ಲ. ಅದರ ಕೀರ್ತಿ ಬೆಳೆಯುತ್ತ ನಡೆದಿದೆ.

———

## ೬. ಪುಸ್ತಕ ಭಂಡಾರ

"ಉತ್ತಮ ಗ್ರಂಥಸಂಗ್ರಹವೇ ಒಂದು ವಿಶ್ವವಿದ್ಯಾನಿಲಯ" ಎಂದು ಮಹಾಶಯ ಕಾರ್ಲೈಲ್ ಹೇಳಿದ್ದಾನೆ. ಉತ್ತಮ ಗ್ರಂಥಸಂಗ್ರಹವಿದ್ದರೆ ಅದು ಓದಿಗೆ ಪ್ರೇರೇಪಣೆಯನ್ನುಂಟುಮಾಡುತ್ತದೆ. ಹಲವು ವಿಷಯಗಳ ಮೇಲೆ ಗ್ರಂಥಾಭ್ಯಾಸ ಮಾಡುತ್ತ ಮನುಷ್ಯ ವಿಚಾರಪರನೂ ಸುಸಂಸ್ಕೃತನೂ ಆಗುತ್ತಾನೆ ಎಂದು ಕಾರ್ಲೈಲ್ ನಂಬಿದ್ದ. ಎಮರ್ಸನ್, ಕಾರ್ಲೈಲ್, ನ್ಯೂಮನ್, ಎಚ್. ಜಿ. ವೆಲ್ಸ್ ಮೊದಲಾದ ಜ್ಞಾನಿಗಳು, ಸಾಹಿತಿಗಳು ಪುಸ್ತಕಪ್ರಾಣರು. ನಮ್ಮ ದೇಶದ ದೃಷ್ಟಾಂತವನ್ನೇ ತೆಗೆದುಕೊಂಡರೆ ಪಂಡಿತ ಜವಾಹಿರಲಾಲ ನೆಹರೂ, ಎಂ. ಎನ್. ರಾಯ್, ಡಾಕ್ಟರ್ ರಾಜೇಂದ್ರ ಪ್ರಸಾದ್, ಸರ್ವಪಲ್ಲಿ ರಾಧಾಕೃಷ್ಣನ್ ಮೊದಲಾದವರು ವ್ಯಾಸಂಗಪ್ರಿಯರು. ಒಂದೇ ಎರಡೇ - ಹಲವು ಹನ್ನೊಂದು ವಿಷಯಗಳ ಮೇಲೆ ಅವರಿಗೆ ಆಸಕ್ತಿ. ಪುಸ್ತಕ, ಕುಡಿಯುವುದಕ್ಕೆ ಮಧು, ಪಕ್ಕದಲ್ಲಿ ಸಾಕಿಯಿದ್ದರೆ ನನ್ನ ಬಾಳು ತುಂಬಿತು ಎಂದು ಉಮರ್ ಖಯ್ಯಂ ಹೇಳಿದ್ದಾನೆ.

ಸಾಂಸ್ಕೃತಿಕ ಜೀವನಕ್ಕೆ ಪುಸ್ತಕ ಅನ್ನನೀರುಗಳಷ್ಟೆ ಮುಖ್ಯವಾದುದು. ನಾಗಾಲೋಟದಲ್ಲಿ ಸಾಗುತ್ತಿರುವ ಜಗತ್ತಿನ ಚಲನವಲನಗಳನ್ನರಿಯಬೇಕಾದರೆ ಮನುಷ್ಯ 'ಪುಸ್ತಕ ಪಿಶಾಚಿ'ಯಾಗಬೇಕಾಗುತ್ತದೆ. ಒಂದೇ ವಿಷಯದ ಮೇಲೆ ನೂರಾರು ಪುಸ್ತಕಗಳನ್ನೋದುವುದು ಮಾತ್ರವಲ್ಲ - ತನಗೆ ವಿರುದ್ಧವಾದ ಅಭಿಪ್ರಾಯ ವ್ಯಕ್ತವಾಗಿರುವ ಪುಸ್ತಕಗಳನ್ನು

ಹೆಚ್ಚು ಶ್ರದ್ಧೆಯಿಂದ ಓದಬೇಕಾಗುತ್ತದೆ. ಭಾರತವನ್ನರಿಯಲು ಮಾಕ್ಸ್ ಮುಲ್ಲರ್, ಸೋದರಿ ನಿವೇದಿತಾ. ಇ. ಎಮ್. ಫಾಸ್ಟರ್ ಓದಿದರೆ ಸಾಲದು. ಜತೆಗೆ ಮಿಸ್. ಮೇಯೋ, ಬೆವರ್ಲಿ ನಿಕ್ಲಾಸ್, ಆಬೆ ಡೂಬ್ವಾ ಅವರ ಗ್ರಂಥಗಳನ್ನು ಓದಬೇಕಾಗುತ್ತದೆ. ದೃಷ್ಟಿವಿಶಾಲವಾಗುವುದಕ್ಕೆ, ಹಲವು ಮನಸ್ಸುಗಳ ಓರೆಕೋರೆಗಳನ್ನರಿಯುವುದಕ್ಕೆ ತುಲನಾತ್ಮಕ ಓದುಗಾರಿಕೆ ಅತ್ಯಗತ್ಯವಾಗುತ್ತದೆ.

ಓದಿಗಾಗಿ ಪುಸ್ತಕವೇ ವಿನಾ, ಪುಸ್ತಕಕ್ಕಾಗಿ ಓದಲ್ಲ. ಶ್ರೀಮಂತರ ಮನೆಗಳಲ್ಲಿ ಅಂದಚಂದದ ಕಪಾಟುಗಳಲ್ಲಿ ಮಹಾಕವಿಗಳ ಗ್ರಂಥರಾಶಿಗಳನ್ನು ಕಾಣಬಹುದು. ಪುಟ ತೆರೆದಿರುವುದಿಲ್ಲ - ಬೈಂಡು ಮಾಸಿರುವುದಿಲ್ಲ. ಶ್ರೀಮಂತರಿಗೆ ಜಗತ್ತೇ ವಿಲಾಸದ ಸಾಧನವಾದಂತೆ ಪುಸ್ತಕ ಭಂಡಾರವೂ ಒಂದು ಸಾಧನ. ಮನೆಯ ಅಲಂಕಾರಕ್ಕೆ ಅದೊಂದು ಆವಶ್ಯಕ ವಸ್ತು.

ಪುಸ್ತಕ ಕೊಂಡು ಓದಲಾರದ ಜನ ಸಾರ್ವಜನಿಕ ಪುಸ್ತಕ ಭಂಡಾರಗಳ ನೆರವು ಪಡೆಯುತ್ತಾರೆ. ಅಲ್ಪ ವೆಚ್ಚದಲ್ಲಿ ಅಮೂಲ್ಯ ಗ್ರಂಥಗಳನ್ನು ಓದಲಿಕ್ಕೆ ಸಾಧ್ಯವಾಗುತ್ತದೆ. ಅಂತಹ ಭಂಡಾರಗಳ ಸಹಾಯದಿಂದ ಕೆಲವು 'ಖಾಸಗಿ' ಭಂಡಾರಗಳು ಬೆಳೆಯುವುದಕ್ಕೆ ಅನುಕೂಲವಾಗುತ್ತದೆ. ಪರೀಕ್ಷೆಗೆ ಕೆಲವು ದಿವಸ ಮುಂಚೆ ಸಾರ್ವಜನಿಕ ಪುಸ್ತಕ ಭಂಡಾರಗಳ ಸ್ಥಿತಿ ನೋಡಬೇಕು. ಬಿ. ಎ. ಕ್ಲಾಸಿಗೆ 'ಷೇಕ್ಸ್‌ಪಿಯರ'ನ ಒಂದು ನಾಟಕ ಪಠ್ಯಪುಸ್ತಕವಾಗಿದೆಯೆಂದು ಭಾವಿಸೋಣ. ಯಾವ ಮಾಯೆಯಲ್ಲೋ 'ಎನ್‌ಸೈಕ್ಲೋಪೀಡಿಯಾ ಬ್ರಿಟಾನಿಕಾ'ದ ಷೇಕ್ಸ್‌ಪಿಯರ್ ಹಾಳೆಗಳು ಕಾಣೆಯಾಗಿರುತ್ತವೆ. ಬ್ರ್ಯಾಡ್ಲಿ, ಡೌಡನ್, ಬ್ರಾಂಡರ್ ಮ್ಯಾಥ್ಯೂಸ್, ಫ್ರಾಂಕ್ ಹ್ಯಾರಿಸ್ಸರ ಗ್ರಂಥಗಳನ್ನು ಕಪಾಟೇ ನುಂಗಿಬಿಟ್ಟಿರುತ್ತದೆ.

ಸಾರ್ವಜನಿಕ ಭಂಡಾರಗಳಲ್ಲಿ ಇನ್ನೊಂದು ಚಮತ್ಕಾರ ನಡೆಯುತ್ತದೆ. ನೆಹರೂ ಅವರ 'Glimpses of World History' ಬೇಕಾಗಿದ್ದರೆ ಅದಕ್ಕಾಗಿ ಇತಿಹಾಸ ಪುಸ್ತಕಗಳ ಕಪಾಟು ಹುಡುಕಿದರೆ ಅದು ದೊರೆಯುವುದು ದುರ್ಲಭ. ಭಂಡಾರದಲ್ಲಿ ಪುಸ್ತಕ ಯಾವ ಕಾರಣಕ್ಕಾಗಿಯಾದರೂ ಉಳಿದಿದ್ದರೆ ಅದನ್ನು ವಿಜ್ಞಾನಶಾಖೆಯಲ್ಲಿ ಹುಡುಕಬೇಕು. ನೆಹ್ರೂ

ಭಕ್ತರು ಯಾರಾದರೂ ಅದನ್ನು ಯಾರೂ ಸುಳಿಯದ ಕಪಾಟಿನಲ್ಲಿ ಬಚ್ಚಿಟ್ಟಿರುತ್ತಾರೆ.

ಸಾರ್ವಜನಿಕ ಭಂಡಾರಗಳಿಂದ ಪುಸ್ತಕ ಒಯ್ಯುವವರು ವಹಿಸುವ ಸ್ವಾತಂತ್ರ್ಯ ನಿಜಕ್ಕೂ ಪ್ರಶಂಸಾರ್ಹವಾದುದಾಗಿದೆ. ಬೇಡದ ಪುಸ್ತಕದ ಅಂಚಿನಲ್ಲಿ ಓದುಗರು ಬರೆಯುವ ಟೀಕೆ ಟಿಪ್ಪಣಿಗಳು ಕೆಲವು ಸಲ ಪುಸ್ತಕಕ್ಕಿಂತಲೂ ಸ್ವಾರಸ್ಯವಾಗಿರುತ್ತವೆ. ನಾನೇ ಒಂದುಸಲ ನನ್ನ 'ರಾಜಾ ರವಿವರ್ಮ' ಗ್ರಂಥದ ಮೇಲೆ ಕೈಯಿಟ್ಟೆ. ಕುತೂಹಲದಿಂದ ಹೊರಗೆ ತೆಗೆದು ನೋಡಿದೆ. ಪುಸ್ತಕವನ್ನು ಬಹಳ ಜನ ಓದಿದ್ದರು. ಅಭಿಮಾನಿಗಳು ಯಾರೋ ಪುಸ್ತಕಕ್ಕೆ ತೈಲಾಭ್ಯಂಜನವನ್ನು ಮಾಡಿಸಿದ್ದರು. 'ಅಶೋಕ ವೃಕ್ಷದಡಿ ಸೀತೆ'ಯ ಚಿತ್ರ ವರ್ಣನೆ ಬಂದಿರುವ ಪುಟಗಳ ಮಧ್ಯೆ ಯಾರೋ ಪುಣ್ಯಾತ್ಮರು ಹೋಳಿಗೆ ಚೂರು ಇಟ್ಟಿದ್ದರು. ರಾವಣನ ಸೆರೆಯಲ್ಲಿದ್ದ ಸೀತಾಮಾತೆ ಎಷ್ಟು ಹಸಿದಿರುವಳೋ ಎಂದು. ಮುಖಚಿತ್ರ ನೋಡಿದೆ - ಕೆಳಗೆ 'ಗ್ರಂಥಕರ್ತ' ಎಂದಿತ್ತು. ಚಿತ್ರದ ಮುಖದ ಮೇಲೆ ಮೂರುನಾಮ - ಮೇಲ್ತುಟಿಯ ಮೇಲೆ ಗಿರಿಜಾಮೀಸೆ - ಬಾಯಲ್ಲಿ ಉರಿಯುತ್ತಿರುವ ಸಿಗರೇಟ್. ನನ್ನ ಅಭಿಮಾನಿಗಳು ಯಾರಿಗೋ ನನ್ನ ರೂಪದ ಮೇಲೆ ಭಯಂಕರ ಕೋಪ ಬಂದಿರಬೇಕು.

ನನ್ನ ಸ್ವಂತ ಪುಸ್ತಕ ಭಂಡಾರ ಏಕೋ ಪ್ರತಿವರ್ಷ ಕೊರಗುತ್ತಿದೆಯಲ್ಲಾ - ಈ ರಾವಣನ ಹೊಟ್ಟೆಗೆ ಎಷ್ಟು ಹಾಕಿದರೂ ಅದು ತೆಳ್ಳಗೇ ಇದೆಯಲ್ಲಾ ಎಂದು ಪಶ್ಚಾತ್ತಾಪವಾಯಿತು. ಒಮ್ಮೆ ಗೆಳೆಯರೊಬ್ಬರಲ್ಲಿ ಹೋದಾಗ ಅವರ ಸ್ವಂತ ಭಂಡಾರ ನೋಡಿದೆ. ಮನಸ್ಸಿಗೆ ನೆಮ್ಮದಿಯಾಯಿತು - ನನ್ನ ಪುಸ್ತಕಗಳು ಅವರಿವರ ಕೈಸೇರಿ ಹಾಳಾಗಿಲ್ಲವೆಂದು!

ಪ್ರಸಿದ್ಧ ಪ್ರಬಂಧಕಾರ ಗಾರ್ಡಿನರ್ ಒಂದು ಸ್ವಾರಸ್ಯವಾದ ಕತೆ ಹೇಳಿದ್ದಾನೆ. ಗೆಳೆಯನ ಮನೆಗೆ ಹೋದ ಒಬ್ಬ ಅವನ ಭಂಡಾರ ನೋಡಿದನಂತೆ. ಒಂದೆರಡು ಪುಸ್ತಕಗಳನ್ನು ಎರವಲು ತೆಗೆದುಕೊಂಡು ಹೋಗಬೇಕೆಂದು ಮನಸ್ಸಾಯಿತು. ಕೇಳಿದ. ಗೆಳೆಯ ನಿರ್ದಾಕ್ಷಿಣ್ಯವಾಗಿ 'ಕೊಡಲಾಗುವುದಿಲ್ಲ' ಎಂದ.

‘ ಏಕಯ್ಯಾ ಹೀಗೆ ಮಾಡುತ್ತೀ - ನಿನ್ನ ಪುಸ್ತಕ ನಾನು ತಿನ್ನುವುದಿಲ್ಲ. ಓದಿ ಹಿಂದಿರುಗಿ ಕೊಡುತ್ತೇನೆ.’

ಗೆಳೆಯ ನಕ್ಕು ಹೇಳಿದ—

‘ ಹುಚ್ಚಾ, ಇದೇ ಮಾತು ನಾನು ಹೇಳಿ ಹೇಳಿ ಈ ಭಂಡಾರ ಬೆಳಸಿರುವುದು. ನಿನ್ನ ಮಾತಿಗೆ ಸಗ್ಗುತ್ತೇನೆಯೇ ?’

ರೊಕ್ಕ ಬಿಚ್ಚದೆ ಭಂಡಾರ ಕೂಡಿಸುವ ಕಲೆ ಕೆಲವರಿಗೆ ಸಾಧಿಸಿದೆ. ಆ ಮಹಾನುಭಾವರು ಸಾರ್ವಜನಿಕ, ಖಾಸಗಿ ಎಂದು ವ್ಯತ್ಯಾಸ ಮಾಡ ಹೋಗುವುದಿಲ್ಲ. ಪುಸ್ತಕ ಭಂಡಾರಗಳ ಒಡೆಯರು ನಿಜವಾಗಿಯೂ ಉದಾರಚಿತ್ತರಾಗಿದ್ದರೆ ಅಂತಹ ಮಹಾನುಭಾವರ ಸಂಬಂಧ ಹೆಚ್ಚು ಹೆಚ್ಚು ಬೆಳಸಬೇಕು.

———

## ೧೦. ಪುಸ್ತಕ ಕೊಳ್ಳುವುದು

ನನ್ನ ಚಟಗಳಲ್ಲಿ ಮೊದಲನೆಯ ಸ್ಥಾನ ಪುಸ್ತಕ ಕೊಳ್ಳುವುದಕ್ಕೆ. ಯಾವ ಊರಿಗೆ ಹೋದರೂ ನಾನು ಮೊದಲು ಹುಡುಕುವುದು ಆ ಊರಿನ ಹಳೆಯ, ಹೊಸ ಪುಸ್ತಕಗಳ ಅಂಗಡಿ. ಪುಸ್ತಕಗಳನ್ನು ಕೊಳ್ಳುವುದು, ಓದುವುದು ಚಟಗಳ ಪಂಕ್ತಿಗೆ ಸೇರಬೇಕಾಗಿಲ್ಲ ಎಂದು ಕೆಲವರು ಹೇಳ ಬಹುದು. ಸಮಕಾಲೀನ ಸೋದರ ಕನ್ನಡ ಸಾಹಿತಿಗಳ ಗ್ರಂಥಗಳನ್ನೂ ಕೊಂಡು ಓದುವ ಅಭ್ಯಾಸವಿಟ್ಟುಕೊಂಡಿದ್ದೇನೆ. ಕೊಂಡು - ಓದುವುದರ ಮೇಲೆ ನಾನು ಹೆಚ್ಚು ಪ್ರಸ್ತಾಪಿಸಿರುವುದಕ್ಕೆ ಕಾರಣವಿದೆ. ಕನ್ನಡ ಸಾಹಿತಿಗಳು ಬಹುಮಂದಿಗೆ ಓದುವ ಅಭ್ಯಾಸವಿಲ್ಲ. ಓದಿದರೂ ಕನ್ನಡ ಪುಸ್ತಕಗಳನ್ನು ಓದುವ ಅಭ್ಯಾಸವಿಲ್ಲ. ಅಪ್ಪಿತಪ್ಪಿ ಕನ್ನಡ ಪುಸ್ತಕ ಓದಿದರೆ ಕೊಳ್ಳುವ ಅಭ್ಯಾಸ ಖಂಡಿತ ಇಲ್ಲ. ಕನ್ನಡ ಪುಸ್ತಕವೆಂದರೆ 'ಕಾಣಿಕೆ' ಯಾಗಿಯೇ ಬರಬೇಕು. ಸ್ವರಾಜ್ಯ ಲೋಕಮಾನ್ಯ ತಿಲಕರ ಜನ್ಮಸಿದ್ಧ ಹಕ್ಕು ಆಗಿದ್ದಂತೆ 'ಕಾಣಿಕೆ' ಸಾಹಿತಿಗಳ ಜನ್ಮಸಿದ್ಧ ಹಕ್ಕು.

ಪುಸ್ತಕಗಳನ್ನು ಕೊಳ್ಳುವುದಕ್ಕೆ ಹೋದಾಗ ನನಗೆ ಕೆಲವು ಸ್ವಾರಸ್ಯ ವಾದ ಅನುಭವಗಳಾಗಿವೆ. ಅವುಗಳನ್ನು ನಿರೂಪಿಸಿದರೆ ಪುಸ್ತಕ ಕೊಳ್ಳು ವುದೂ ಎಷ್ಟು ಸಾಹಸದ ಕೆಲಸವೆಂದು ಅರಿವಾಗುತ್ತದೆ.

ಮೊದಮೊದಲು ಕನ್ನಡ ಗ್ರಂಥಗಳನ್ನು ಹೆಚ್ಚಾಗಿ ಪ್ರಕಟಿಸುತ್ತಿದ್ದ ವರು ಬಳ್ಳಾರಿ, ಮೈಸೂರು, ಬೆಂಗಳೂರಿನ ಕೆಲವು ವೈಶ್ಯ ವರ್ತಕರು. ಉತ್ತರ ಕರ್ನಾಟಕದ ಕೆಲವು ವೀರಶೈವ ವರ್ತಕರು. ಬಳ್ಳಾರಿಯಲ್ಲಿ ಈ

ವೈಶ್ಯ ಪ್ರಕಾಶಕರು ಈಗ ನಾವಮಾವಶೇಷವಾಗಿದ್ದಾರೆ. ಮೈಸೂರಿನಲ್ಲಿ ಸ್ವಲ್ಪ ಉಳಿದಿದ್ದಾರೆ - ಬೆಂಗಳೂರಿನಲ್ಲಿ ಸ್ವಲ್ಪ ಹೆಚ್ಚಾಗಿಯೇ ಇದ್ದಾರೆ. ಅವರಲ್ಲಿ ಒಬ್ಬರು ನಯವಿನಯಪರರು, ಪರಮ ದೈವಭಕ್ತರೆಂದು ಕಾಣುತ್ತದೆ. ಅಂಗಡಿಗೆ ಹೋದಕೂಡಲೆ ಕಾಣುವುದು ತಿರುಪತಿ ವೆಂಕಟೇಶದೇವರ ದೊಡ್ಡ ಪಟ. ಅದರ ತಲೆಯ ಮೇಲೆ ಹೂವು ತಪ್ಪದೆ ಇರುತ್ತದೆ. ಶೆಟ್ಟರು ನಿಜಗುಣಶಿವಯೋಗಿ, ಸಪ್ಪಣ್ಣಸ್ವಾಮಿ, ಲಕ್ಷ್ಮೀಶ, ನರಹರಿ, ನಾರಣಪ್ಪ, ಷಡಕ್ಷರಿ ಮೊದಲಾದ ಕವಿಗಳ ಗ್ರಂಥಗಳನ್ನು ಹಲವು ಸಾರಿ ಪ್ರಕಟಿಸಿದ್ದಾರೆ. ಅವರ ಮಾತು ಬೆಣ್ಣೆಯಲ್ಲಿ ಕೂದಲೆಳೆದಷ್ಟು ನಯವೆಂದು ಮೊದಲೇ ಹೇಳಿದ್ದೇನೆ.

"ಶೆಟ್ಟರೇ............"

"ಬನ್ನಿ, ಸ್ವಾ್ವ - ಅ - ಅ - ಮಿ."

ಅಂಜಲಿಬದ್ಧನಾಗಿ ನಿಂತು, ಎಡಬುಜವನ್ನು ಓರೆಮಾಡಿ, ಮಂದ ಸ್ಮಿತವನ್ನು ಬೀರುವ ಪ್ರಾಣಿಯ ಚಿತ್ರವನ್ನು ಭಾವಿಕರಾದ ಓದುಗರು ಚಿತ್ರಿಸಿಕೊಳ್ಳಬೇಕು. ಅವರ 'ಸ್ವಾಮಿ'ಯ ಪ್ರಸ್ತಾರವೇ ಒಂದು ವಿಚಿತ್ರ. ಸಕಾರವನ್ನು ಒತ್ತುವುದರಲ್ಲಿ ಎಷ್ಟು ನಯವನ್ನು ತರಬಹುದೋ ಅಷ್ಟನ್ನೂ ಶೆಟ್ಟರು ಸಾಧಿಸಿದ್ದಾರೆ.

ಅಂಗಡಿಯ ಒಳಗೆ ಕಾಲಿಟ್ಟದ್ದಾಯಿತು. ಹಲವು ಪಾದಸ್ಪರ್ಶದಿಂದ ಪವಿತ್ರವಾದ ಜಮಖಾನೆಯ ಮೇಲೆ ಕುಳಿತದ್ದಾಯಿತು.

"ಏನು ಬೇಕೋ ಸ್ವಾ್ವ - ಅ - ಅ - ಮೀಗೆ."

"ವಿವೇಕಚಿಂತಾಮಣಿ ಇದೆಯೇ ಶೆಟ್ಟರೇ."

"ಅಯ್ಯೋ!" ಶೆಟ್ಟರು ನಿಜವಾಗಿಯೂ ನಿಟ್ಟುಸಿರುಬಿಟ್ಟರು.

"ಏಕೆ ಶೆಟ್ಟರೇ."

"ಒಂದೇ ಪ್ರತಿ ಇತ್ತು. ನಿನ್ನೆತಾನೆ ಕೊಟ್ಟುಬಿಟ್ಟೆನಲ್ಲಾ ಸ್ವಾ್ವಮಿ."

"ನನಗೆ ಒಂದು ಪ್ರತಿ ಬೇಕೇ ಬೇಕು - ನೋಡಿ ಶೆಟ್ಟರೇ.

"ಇಲ್ಲ ಸ್ವಾ್ವಮಿ - ಇಟ್ಟುಕೊಂಡು ನಿಮಗೆ ಇಲ್ಲ ಅನ್ನುತ್ತೀನೆಯೇ?"

" ಒಂದು ಸಲ ನೋಡಬಾರದೇ."

" ಆಗಲಿ ಸ್ವಾಮಿ - ನಿಮ್ಮ ಚಿತ್ತ."

ಶೆಟ್ಟರು ಎದ್ದು ಹುಡುಕಾಡಿದ ಶಾಸ್ತ್ರಮಾಡಿ ಜೀರ್ಣವಾದ ಒಂದು ಪ್ರತಿ ' ವಿವೇಕಚಿಂತಾಮಣಿ ' ಹೊರಗೆ ತೆಗೆಯುತ್ತಾರೆ. ಅದನ್ನು ಕೂಡಲೆ ನಮ್ಮ ಕೈಗೆ ಕೊಡುವಹಾಗಿಲ್ಲ. ತಮ್ಮ ಕೈಯಲ್ಲೇ ಹಿಡಿದು ತಿರುಗಿಸಿ ತಿರುಗಿಸಿ ನೋಡಿ -

" ಅಮೂಲ್ಯ ಗ್ರಂಥ ಸ್ವಾಮಿ."

" ಹೌದು ಶೆಟ್ಟರೇ."

" ನಿಜಗುಣ ಮಹಾನುಭಾವ - ಮಹಾಶಿವಯೋಗಿ."

" ನಿಸ್ಸಂದೇಹವಾಗಿ."

" ಈಗ ಇಂಥ ಗ್ರಂಥಗಳನ್ನು ಅಚ್ಚುಹಾಕೋರೇ ಇಲ್ಲ ಸ್ವಾಮಿ."

" ಏಕೆ ಶೆಟ್ಟರೇ."

" ಜನ ಕೆಟ್ಟುಹೋಯಿತು. ಕಲ್ಕಿ ಅವತಾರವಾಯಿತು, ಜನಕ್ಕೆ ಧರ್ಮಶ್ರದ್ಧೆ ಹೋಗಿಬಿಟ್ಟಿತು ಸ್ವಾಮಿ."

" ಕಲ್ಕಿ ಅವತಾರ ಯಾವದು ಶೆಟ್ಟರೇ."

" ಗೊತ್ತಿಲ್ಲವೇ - ಆ ಗಾಂಧಿ - ಹೊಲೆಯರನ್ನೆಲ್ಲಾ ಹರಿಜನ ಮಾಡಿದ್ದಾನಲ್ಲಾ............"

" ಅದು ಹೋಗಲಿ. ಪುಸ್ತಕಕ್ಕೆ ಎಷ್ಟು ಕೊಡಬೇಕು ಶೆಟ್ಟರೇ."

" ನಿಮಗೆ ತಿಳಿದದ್ದು ಕೊಡಿ ಸ್ವಾಮಿ."

" ಇಲ್ಲ - ನೀವೇ ಹೇಳಿಬಿಡಿ."

" ನನಗೆ ಅದನ್ನು ಮಾರುವುದಕ್ಕೆ ಇಷ್ಟವಿಲ್ಲ. ಸ್ವಂತಕ್ಕೇಂತ ಇಟ್ಟುಕೊಂಡಿದ್ದೆ. ನಿಮ್ಮ ವಿಶ್ವಾಸ ಕಳೆದುಕೊಳ್ಳಬಾರದೂಂತ ಕೊಡುತ್ತೇನೆ. ಈ ಪುಸ್ತಕಗಳು ತಿರುಗಿ ಅಚ್ಚು ಆಗೋದಿಲ್ಲ ಸ್ವಾಮಿ,"

" ಹೋಗಲಿ - ಬೆಲೆ ಹೇಳಬಾರದೇ ?"

" ನಾಲ್ಕು ರೂಪಾಯಿ ಕೊಟ್ಟುಬಿಡಿ ಸ್ವಾಮಿ."

ಇಷ್ಟುಹೊತ್ತಿಗೆ ಪುಸ್ತಕ ಶೆಟ್ಟರ ಕೈಬಿಟ್ಟು ನನ್ನ ಕೈಗೆ ಬಂದಿರುತ್ತದೆ.

"ಪುಸ್ತಕದ ಮೇಲೆ ೧॥ ಎಂದು ಹಾಕಿದೆ. ನೀವು ಬಹಳ ಕೇಳು ತ್ತೀರಲ್ಲಾ ಶೆಟ್ಟರೇ."

"ಹೋಗಲಿ-ಬಿಟ್ಟುಬಿಡಿ ಸ್ವಾಮಿ."

ಮತ್ತೆ ಅರ್ಧಗಂಟೆ ಚೌಕಸಿಯಾದ ಮೇಲೆ ಶೆಟ್ಟರು ೩॥ ರೂ.ಗೆ ಪುಸ್ತಕವನ್ನು 'ನನಗಾಗಿ' ಕೊಡುತ್ತಾರೆ.

ಬೆಲೆ ಸ್ವಲ್ಪ ಹೆಚ್ಚಾದರೂ ಬೇಕಾದ ಪುಸ್ತಕ ದೊರಕಿತಲ್ಲಾ ಎಂದು ನಾನು ಸಂತೋಷಪಟ್ಟೆ. ದಾರಿಯಲ್ಲಿ ಸಿಕ್ಕಿದ ಗೆಳೆಯ ವ್ಯವಹಾರ ಕೇಳಿ ನಕ್ಕ. "ಗಟ್ಟಿವ್ಯಾಪಾರ ಮಾಡಿದ್ದರೆ ಶೆಟ್ಟರು ನಾಲ್ಕೆಂಟಾಣೆಗೆ ಪುಸ್ತಕ ಕೊಡುತ್ತಿದ್ದರು - ಈ ಪುಸ್ತಕಗಳನ್ನು ಅವರು ಮಣಗಟ್ಟಲೆ ವ್ಯಾಪಾರ ಮಾಡುತ್ತಾರೆ" ಎಂದು ಮೂದಲಿಸಿದ.

ಮೈಸೂರಿನ ಅನುಭವ ಇದಕ್ಕೂ ವಿಚಿತ್ರವೆನಿಸಿತು ನನಗೆ. ಮೈಸೂರಿನಲ್ಲಿ ಒಬ್ಬರು ಸಂಶೋಧಕ - ಪ್ರಕಾಶಕ - ಪುಸ್ತಕ ವ್ಯಾಪಾರಿಗಳು. ದೊಡ್ಡ ಪಂಡಿತರು. ಅನೇಕ ಹಳೆಗನ್ನಡ ಕಾವ್ಯಗಳನ್ನು ಅವರು ಪ್ರಕಟಿಸಿದ್ದರು. ನಾನೊಮ್ಮೆ 'ದಶಕುಮಾರ ಚರಿತ್ರೆ' 'ರಸರತ್ನಾಕರ' ಬೇಕಾಗಿ ಅವರಲ್ಲಿ ಹೋದೆ. ಮೂರುನಾಲ್ಕುಸಲ ಹೋದರೂ ಮಹಾಶಯರ ದರ್ಶನ ಸಿಗಲಿಲ್ಲ. ಅವರ ಮಕ್ಕಳೋ ಯಾರೋ

"ಬೆಳಿಗ್ಗೆ ೭ ಗಂಟೆಗೆ ಬಂದುಬಿಡಿ ಸಾರ್. ಅವರು ಮನೆಯಲ್ಲೇ ಇರುತ್ತಾರೆ."

"ನಾನು ನಾಳೆ ಮೆಯಿಲ್ ಗಾಡಿಗೆ ಊರಿಗೆ ಹೋಗಬೇಕಾಗಿದೆ. ಪುಸ್ತಕಗಳ ಸಲುವಾಗಿಯೇ ಈ ಮೂರು ದಿವಸ ನಿಂತದ್ದು - ನೀವೇ ಪುಸ್ತಕಗಳನ್ನು ತೆಗೆದುಕೊಂಡಿಟ್ಟುಕೊಂಡಿದ್ದು ಬೆಲೆ ತಿಳಿಸಿದರೆ ಕೊಂಡುಕೊಳ್ಳುತ್ತೇನೆ."

"ಅದು ಸಾಧ್ಯವಿಲ್ಲ ಸಾರ್. ನಮ್ಮ ತಂದೆಯವರೇ ಎಲ್ಲಾ ವಹಿವಾಟು ನಡಸುತ್ತಾರೆ - ಬೆಳಿಗ್ಗೆ ಬನ್ನಿ ಹೋಗಿ."

ಬೆಳಿಗ್ಗೆ ಬೇಗ ಏಳಬೇಕಾಗುತ್ತದೆಂದು ನಾನು ಬೆಳಿಗ್ಗಿನ ರೈಲಿನಲ್ಲಿ ಪ್ರಯಾಣ ಮಾಡುವುದಿಲ್ಲ. ವಿದ್ಯಾರ್ಥಿಯಾಗಿದ್ದಾಗ ಬೆಳಿಗ್ಗೆ ಏಳಲಾರದೆ ಪರೀಕ್ಷೆಗೆ 'ಚಕ್ಕರ್' ಹೊಡೆದುದೂ ಉಂಟು. ದಂಡಿ, ಸಾಳ್ವರ ಪುಣ್ಯ

ದಿಂದ ಆರುಗಂಟೆಗೇ ಎದ್ದು ಪುಸ್ತಕಪ್ರಭುಗಳ ಮನೆಗೆ ಏಳಕ್ಕೆ ಸರಿಯಾಗಿ ಹೋದೆ. ಅರ್ಧಗಂಟೆ ಕಾದರೂ ಬಾಗಿಲು ತೆರೆಯುವ ಸಂಭವ ಕಾಣಲಿಲ್ಲ. ಒಂದೆರಡುಸಲ ಮೃದುವಾಗಿ ತಟ್ಟಿದೆ. ಒಳಗಿನಿಂದ ಓ ಬರಲಿಲ್ಲ. ಅರ್ಧ ಗಂಟೆ ಸುತ್ತಾಡಿಕೊಂಡು, ಆನಂದಭವನದಲ್ಲಿ ಕಾಫಿ ಹೊಯ್ದುಕೊಂಡು ಎಂಟುಗಂಟೆಗೆ ಮತ್ತೆ ಒಕ್ಕರಿಸಿದೆ.

ನಾಲ್ಕೈದುಸಲ ಕೂಗಿದ ಮೇಲೆ ಒಳಗಿನಿಂದ 'ಮಕ್ಕಳು' ದಯೆ ಮಾಡಿಸಿದರು.

"ಪುಸ್ತಕ ಕೊಡುವಿರಾ."

"ನೀವು ೭ ಗಂಟೆಗೆ ಏಕೆ ಬರಲಿಲ್ಲ?"

"ಬಂದಿದ್ದೆ - ಬಾಗಿಲು ಹಾಕಿತ್ತು. ಈಗ ಸಾಧ್ಯವೇ?"

"ತಂದೆಯವರು ಸ್ನಾನಕ್ಕೆ ಹೋಗಿದ್ದಾರೆ - ೧೦ ಗಂಟೆಗೆ ಬನ್ನಿ."

ಎಂದು ಒಳಕ್ಕೆ ಹೋಗಿಯೇ ಬಿಟ್ಟರು. ಮತ್ತೆ ಎರಡು ಗಂಟೆಗಳ ಕಾಲವನ್ನು 'ಸೋಮಾರಿ ಪಾರ್ಕ್'ನಲ್ಲಿ ಕಳೆದು ಹತ್ತುಗಂಟೆಗೆ ಹಾಜರಾದೆ. ಮಕ್ಕಳು ಅಪ್ಪಣೆಕೊಡಿಸಿದರು. 'ಯಜಮಾನರು ಪೇಟೆಕಡೆ ಹೋಗಿದ್ದಾರೆ. ೧೨ ಗಂಟೆಗೆ ಬನ್ನಿ.'

೧೨ ಗಂಟೆಗೆ ಬಂದದ್ದಾಯಿತು. ಆಗತಾನೆ ಯಜಮಾನರು ಊಟಕ್ಕೆ ಕುಳಿತಿದ್ದರು. ಅವರ ಮನೆ ವೆರಾಂಡದಲ್ಲಿದ್ದ ಗಾರೆಬೆಂಚಿನ ಮೇಲೆ ಕುಳಿತೆ. ನನ್ನ ಮನಸ್ಸು ಆಗ ಯಾವ ಪ್ರಶಾಂತಭಾವದಲ್ಲಿತ್ತೆಂಬುದನ್ನು ವರ್ಣಿಸಬೇಕಾಗಿಲ್ಲ.

ಒಂದು ಹೊಡೆಯಿತು. ಮಕ್ಕಳು ಹೊರಗೆ ಬಂದು ನೋಡಿ "ನೀವು ಇಲ್ಲೇ ಇದ್ದೀರಾ."

"ಇದ್ದೀನಿ ಮಹಾಸ್ವಾಮಿ."

"ಯಜಮಾನರು ಸ್ವಲ್ಪ ಮಲಗಿದ್ದಾರೆ. ಕೂಡಿ, ಇನ್ನೊಂದು ಗಂಟೆ ಒಳಗಾಗಿ ಎದ್ದುಬಿಡುತ್ತಾರೆ."

"ತಮ್ಮ ಚಿತ್ತ."

ಎಂದು ಕುಳಿತೆ. ಯಜಮಾನರು ಎದ್ದು ಹೊರಗೆ ಬಂದಾಗ ಆಗಿದ್ದುದು ಎರಡಲ್ಲ - ನಾಲ್ಕು ಗಂಟೆ. ಕೈಯಲ್ಲಿ ನಶ್ಯದ ಚಿಟಿಕೆ - ಹಣೆಗೆ

ತೀಡಿದ ನಾಮ – ಮುಖದ ಮೇಲೆ ಅನಂತ ಅತೃಪ್ತಿ ಎದ್ದು ಕಾಣುತ್ತಿದ್ದವು. ಬಂದ ಯಜಮಾನರು ತಲೆಯಿಂದ ಕಾಲಿನ ವರೆಗೆ ನನ್ನನ್ನು ಪರೀಕ್ಷಿಸಿ

"ನಿಮಗೆ ಯಾವದೋ ಪುಸ್ತಕ ಬೇಕಿತ್ತಂತೆ."

"ಹೌದು. ಸಾಳ್ವನ ರಸರತ್ನಾಕರ – ದಂಡಿಯ ದಶಕುಮಾರ ಚರಿತ್ರೆ."

"ಅವು ಲಕ್ಷಣ ಗ್ರಂಥಗಳು. ಬಹಳ ಪ್ರೌಢವರ್ಗದವು. ನಿಮಗೇಕೆ?"

"ಏನೋ ಓದಬೇಕು ಅನಿಸಿತು ಅದಕ್ಕೆ."

"ಕನ್ನಡ ಅಭ್ಯಾಸಮಾಡಿದ್ದೀರಾ."

"ಸ್ವಲ್ಪಮಟ್ಟಿಗೆ."

"ಆಗಲಿ. ನಾಳೆ ಬನ್ನಿ ಹುಡುಕಿಟ್ಟಿರುತ್ತೇನೆ."

"ಸ್ವಲ್ಪ ಈಗಲೇ ನೋಡಿದ್ದರಾಗಿತ್ತು. ನಾನು ೩-೪ ದಿವಸದಿಂದ ಬರುತ್ತಿದ್ದೇನೆ."

"ಹೌದು. ರತ್ನಗಳು ಬೇಕಾದರೆ ಸ್ವಲ್ಪ ಪ್ರಯಾಸಪಡಬೇಕು. ಆಗಲಿ – ಕೂಡಿ – ನೋಡುತ್ತೇನೆ."

ಒಳಗೆಹೋದ ಯಜಮಾನರು ೫। ಗಂಟೆಗೆ ಹೊರಗೆ ಬಿಜಯಮಾಡಿದರು. ಕೈಯಲ್ಲಿ ಬೈಂಡಿಲ್ಲದ, ಕೆಲವು ಹಾಳೆಗಳು –

"ಒಂದೇ ಪ್ರತಿ ನನ್ನಲ್ಲಿರುವುದು. ಸ್ವಂತ ಉಪಯೋಗಕ್ಕೆ ಇಟ್ಟುಕೊಂಡಿದ್ದೆ. ನಿಮ್ಮ ಉತ್ಸಾಹ ನೋಡಿ ಕೊಡುತ್ತೇನೆ."

"ಸಂತೋಷ – ಬೆಲೆಯೆಷ್ಟು."

"ರಸರತ್ನಾಕರ ೩ ರೂ. ದಶಕುಮಾರ ೪॥ ರೂ."

ಮಾತನಾಡದೆ ೭॥ ರೂಪಾಯಿ ಅವರ ಕೈಗಿತ್ತು ಪುಸ್ತಕ ಕಸಿದುಕೊಂಡು ಅಲ್ಲಿಂದ ಕಂಬಿಕಿತ್ತೆ. ಇಂದಿನವರೆಗೆ ಯಾವ ಕಾರಣಕ್ಕೂ ಆ ರಸ್ತೆಯಲ್ಲಿ ನಾನು ಸುಳಿದಿಲ್ಲ.

ದುಡ್ಡು ತೆಗೆದುಕೊಂಡು ಉಪನ್ಯಾಸ ಮಾಡದೆ ಪುಸ್ತಕ ಕೊಡುವುದು, ಪುಸ್ತಕವಿಲ್ಲದಿದ್ದರೆ 'ಇಲ್ಲ'ವೆಂದು ನಯವಾಗಿ ಹೇಳುವುದು ಏಕೊ ಏನೋ ಕನ್ನಡ ಪುಸ್ತಕ ವ್ಯಾಪಾರಿಗಳಿಗೆ ಸಾಧಿಸಿಲ್ಲ.

ನನ್ನ ಗೆಳೆಯರೊಬ್ಬರು ಪುಸ್ತಕ ವ್ಯಾಪಾರಿಗಳಿದ್ದಾರೆ. ದೈವಕೃಪೆ

ಯಿಂದ ಅವರಿಗೆ ಗಡ್ಡ ಬೆಳೆಯುವುದಿಲ್ಲ. ಆದರೂ ಅವರು ಗಡ್ಡದ- ಇಲ್ಲದ ಕೂದಲನ್ನು - ಕೀಳುತ್ತಿರುತ್ತಾರೆ. ಯೋಚನೆ ಬಂದಾಗ ಕೆಲವರು ಮೂಗುಜ್ಜಿಕೊಳ್ಳುತ್ತಾರೆ, ಕೆಲವರು ಅಂಗಿಯ ಗುಂಡಿ ತಿರುವುತ್ತಾರೆ, ಕೆಲವರು ಬೆರಳು ನೀವುತ್ತಾರೆ - ಹಾಗೇ ನನ್ನ ಗೆಳೆಯರು ಗಡ್ಡ ಕಿತ್ತು ಕೊಳ್ಳುವ ಪರಿಪಾಠದವರು. ಅವರ ದೃಷ್ಟಿಯಲ್ಲಿ ತಾವು ನಡೆಸುತ್ತಿರುವ ಪುಸ್ತಕದಂಗಡಿ 'ಲೋಕಹಿತಾರ್ಥಕ್ಕಾಗಿ ನಡೆಸುತ್ತಿರುವ ಒಂದು ಮಹಾ ಸಂಸ್ಥೆ.' ಕೊಳ್ಳುವವ ಅಂಜಿಕೊಂಡೇ ಒಳಗೆ ಕಾಲಿಡಬೇಕು.

"ಸಾಹಿತ್ಯರತ್ನ ಇದೆಯೇ ಸಾರ್."

ಉತ್ತರವಿಲ್ಲ.

"ಸಾಹಿತ್ಯರತ್ನ ಬೇಕು ಸಾರ್."

ಸಾಹಿತ್ಯರತ್ನ ಮಂತ್ರೋಚ್ಚಾರಣೆ ಮೂರುನಾಲ್ಕು ಸಲವಾದ ಮೇಲೆ ಯಜಮಾನರು ಕೂತಲ್ಲಿಂದಲೇ ಮುಖವೆತ್ತಿ ನೋಡಿ - 'ಇಲ್ಲ' ಎಂದು ಮತ್ತೆ ಅಂತರ್ಮುಖರಾಗುತ್ತಾರೆ.

ಕೊಳ್ಳಲು ಬಂದಿದ್ದ ತರುಣ ಹಟಮಾರಿಯಾಗಿದ್ದರೆ ಮತ್ತೆ ಕಾಡು ವುದಕ್ಕೆ ತೊಡಗುತ್ತಾನೆ.

"ಒಂದು ಕಾಪಿ ಬೇಕೇ ಬೇಕು ಸಾರ್."

ತಲೆಬೇಸರಪಟ್ಟುಕೊಂಡು ಯಜಮಾನರು ಒಂದು ಪ್ರತಿ ಕಪಾಟಿ ನಿಂದ ತೆಗೆದು ಗಿರಾಕಿಯ ಮುಂದೆ ಒಗೆಯುತ್ತಾರೆ. ಬೆಲೆ ಸ್ವಾಭಾವಿಕ ವಾಗಿಯೇ ಏರಿರುತ್ತದೆ. ಇಷ್ಟು ಪ್ರಕರಣವಾದ ಮೇಲೆ ಗಿರಾಕಿ 'ಏಕೆ ಬೆಲೆ ಏರಿಸಿದ್ದೀರಿ' ಎಂದು ಕೇಳುವಹಾಗಿಲ್ಲ. ಹಾಕಿದ ಬೆಲೆ ಕೊಟ್ಟು ಅವನು ಪುಸ್ತಕ ಕೊಂಡೊಯ್ದನೋ ಬದುಕಿದ. ಇಲ್ಲದಿದ್ದರೆ ಪುಸ್ತಕ ಒಳಗೆ ಹೋಗಿಬಿಡುತ್ತದೆ.

ವೈಕುಂಠದ ಬಾಗಿಲು ಕಾಯುವ ಜಯವಿಜಯರು ಒಮ್ಮೆ ಸನಕ ಸನಂದಾದಿ ಮುನಿಗಳನ್ನೇ ಒಳಕ್ಕೆ ಬಿಡಲಿಲ್ಲವಂತೆ. ಆ ಕೆಲಸ ನಮ್ಮ ಪುಸ್ತಕ ವ್ಯಾಪಾರಿಗಳಿಗೆ ವಹಿಸಿದರೆ ಅವರು ನಾರಾಯಣ - ಲಕ್ಷ್ಮಿಯರನ್ನೇ ಒಳಗೆ ಬಿಡುವುದಿಲ್ಲ. ಕನ್ನಡ ಸಾರಸ್ವತ ಸಮಾಜವನ್ನು ಮುಧೋಳದ ಸೀಳುನಾಯಿ ಗಳ ಹಾಗೆ ಕಾದು ಈ ಮಹನೀಯರು ಮಹೋಪಕಾರಮಾಡುತ್ತಿದ್ದಾರೆ.

7 ............

# ೧೧. ಅಭ್ಯಾಸಗಳು

ವಿದ್ಯೆ ಅಭ್ಯಾಸದಿಂದ ಸಾಧ್ಯವೆಂದೂ, ಬುದ್ಧಿ ಕರ್ಮಾನುಸಾರವಾದು ದೆಂದೂ ಹಿರಿಯರ ಮತ. ಸಾಧಕನಲ್ಲಿ ಶ್ರದ್ಧೆ ತುಂಬಿದ್ದರೆ ಯಾವ ಹೊತ್ತಿ ನಲ್ಲಾದರೂ ಅವನು ವಿದ್ಯೆಯನ್ನು ಗಳಿಸಲು ಸಾಧ್ಯ. ರವೀಂದ್ರರು ಎಪ್ಪತ್ತು ವಯಸ್ಸಾದನಂತರ ಚಿತ್ರಕಲೆಗೆ ಕೈಹಾಕಲಿಲ್ಲವೇ, ಸಂಗೀತ ವಿದ್ವಾನ್ ವಾಸುದೇವಾಚಾರ್ಯರು ನಲವತ್ತೈದು ಆದಮೇಲೆ ಸಂಗೀತ ಆರಂಭಿಸಲಿಲ್ಲವೇ! ಅತ್ತಿತ್ತ ನೋಡದೆ ಒಂದೇ ಜಾಡು ಹಿಡಿದು, ಕರ್ಮ ಯೋಗಿಯಂತೆ ತಾನು ಗುರಿಯಲ್ಲಿಟ್ಟುಕೊಂಡಿರುವ ವಿದ್ಯೆಯನ್ನು ಸಾಧಿಸ ಬೇಕೆಂದು ಹೊರಡುವ ಸಾಧಕನಿಗೆ ಹಲವಾರು ಅಡ್ಡಿ ಆತಂಕಗಳೊದಗುತ್ತವೆ. ಆದರೆ ಅಂತಿಮ ಜಯ ಅವನದೇ. ಕಲಿಯುವುದಕ್ಕೆ ವಯಸ್ಸಿನ ಇತಿಮಿತಿ ಯಾವ ತೊಂದರೆಯನ್ನೂ ಉಂಟುಮಾಡುವುದಿಲ್ಲ. ಅದು ತ್ರಿಕಾಲಾ ಬಾಧಿತ.

ವಿದ್ಯೆ ಕಲಿಯುವುದು ಎಷ್ಟು ಪ್ರಯಾಸವೋ ಅದಕ್ಕೂ ಹೆಚ್ಚು ಪ್ರಯಾಸ ಕೆಲವು ಕಲಿತ ದುರ್ವಿದ್ಯೆಗಳನ್ನು ಬಿಡುವುದು. ಕುಡಿಯುವ ಚಟವಿರುವವರನ್ನು ನೋಡಿದರೆ ಸಾಕು. ಮನೆಮಾರು ಹೆಂಡತಿಮಕ್ಕಳು ಹೋದರೂ ಚಿಂತೆಯಿಲ್ಲ, ಅವರ ಹೊತ್ತಿಗೆ ಮದ್ಯ ಒದಗಲೇ ಬೇಕು. ಒಮ್ಮೆ ಒಬ್ಬ ಕುಡುಕ ಕಾಲುಜಾರಿ ಭಾವಿಗೆ ಬಿದ್ದನಂತೆ. ಸಾಕಷ್ಟು ನೀರು ಕುಡಿದಿದ್ದ. ಯಾರೊ ಪುಣ್ಯಾತ್ಮರು ಎತ್ತಿ ಮೇಲಕ್ಕೆ ಹಾಕಿದ್ದರು. ಪಕ್ಕ ದಲ್ಲಿದ್ದವ ಅವನಿಗೆ ಎಚ್ಚರ ಬರಲೆಂದು ಸ್ವಲ್ಪ ಬ್ರ್ಯಾಂಡಿಗೆ ನೀರು ಬೆರಸಿ

ಕೊಡಿರೆಂದ. ಕುಡುಕ ಹೇಳಿದನಂತೆ 'ನೀರು ಸಾಕಷ್ಟು ಹೊಟ್ಟೆಗೆ ಹೋಗಿದೆ. ಬರೀ ಬ್ರ್ಯಾಂಡಿ ಕೊಡಿ' ಎಂದು. ಸಾಯುವ ಮುನ್ನ ಬಾಯಿಗೆ ಗಂಗಾಮೃತ ಬಿಡುವ ಪದ್ಧತಿ ಹಿಂದುಗಳಲ್ಲಿದೆ. ಕುಡುಕರ ಬಾಯಿಗೆ 'ಈಚಲ ಅಮೃತ'ವನ್ನೇ ಬಿಡಬೇಕಾಗುತ್ತದೆ.

ಕುಡಿತಕ್ಕೆ ಸರಿಗಟ್ಟುವ ಇನ್ನೊಂದು ಚಟ ದ್ಯೂತ. ಕುದುರೆ ಜೂಜು, ಸಟ್ಟಾ, ಇಸ್ಪೇಟು ಈಗ ಸರ್ವವ್ಯಾಪಿಯಾಗಿವೆ. ಹುಡಿಗಾಳು, ಮೊಣಸಿನಪುಡಿ ಮಾಡುವ ವಿಧವೆಯರು ಕೂಡ ಜೂಜುಕಟ್ಟೆಯ 'ಸೆಕೆಂಡ್ ಎನ್‌ಕ್ಲೋಸರ್'ನಲ್ಲಿ ಠರಾಯಿಸುವುದು ನಿತ್ಯನೋಟ. ಇಸ್ಪೇಟು ಆಡಲು ಬಾರದಿದ್ದರೆ ಆ ಪ್ರಾಣಿ ರೂಕ್ಷಮನುಷ್ಯ ಎಂದೆನಿಸಿಕೊಳ್ಳುತ್ತಾನೆ. ಕ್ಲಬ್ಬುಗಳಿಗಂತೂ 'ಇಸ್ಪೇಟೇ' ಪಂಚಪ್ರಾಣ.

ಈಗ ಇಂಗ್ಲಿಷ್ ಕಲಿತವರಲ್ಲಿ 'ಚಕ್ರಬಂಧ ಸ್ಪರ್ಧೆ'ಯ ಚಟ ತಾನೇ ತಾನಾಗಿದೆ. ಮುಂಬಯಿಯ 'ಟೈಮ್ಸ್ ಆಫ್ ಇಂಡಿಯಾ' ಪತ್ರಿಕೆಯವರಿಗೆ ಈ ಸ್ಪರ್ಧೆಗಳು ಹೊನ್ನಿನ ಮಳೆ ಕರೆಸುತ್ತವೆ. ತಮ್ಮ ಶಬ್ದಕೋಶವನ್ನು ವೃದ್ಧಿಮಾಡಿಕೊಳ್ಳುವುದಕ್ಕೆ ಚಕ್ರಬಂಧ ಸ್ಪರ್ಧೆಗೆ ಕಳಿಸುವುದಾಗಿ ಜಾಣರು ಹೇಳುತ್ತಾರೆ. ರಾತ್ರಿಯೆಲ್ಲ 'ವಿರೈಲ್ ಅಥವಾ ಸ್ಟೆರೈಲ್' ಪದ ಪೋಣಿಸುವುದಕ್ಕೆ ಜಾಗರಣೆ ಮಾಡುತ್ತಾರೆ.

ಈಯೆಲ್ಲ ಚಟಗಳ ಹಿಂದಣ ಮನೋಧರ್ಮ ಮೈ ಕೈ ನೋಯಿಸಿಕೊಳ್ಳದೆ ಹಣ ಸಂಗ್ರಹಿಸುವುದು. ನಾಲ್ಕಾಣೆ ಲಾಟರಿ ಟಿಕೆಟ್ ಕೊಂಡು ನಾಲ್ಕು ಲಕ್ಷ ಕೂಡಲೆ ಗಳಿಸಿಬಿಡಬೇಕು, ಒಂದು ಚಕ್ರಬಂಧ ತುಂಬಿ ಕಳಿಸಿ ಮಾರನೆಯ ವಾರ ೩೦,೦೦೦ ರೂ.ಗೆ ಒಂದು ಚೆಕ್ಕು, ಜತೆಗೊಂದು ಫೋರ್ಡ್ ಕಾರ್ ಸಂಪಾದಿಸಬೇಕೆಂಬ ಹಂಬಲ.

ಜನತೆಯಲ್ಲಿ ಒಂದು ಬಗೆಯ ಅಯೋಗ್ಯ ಅತೃಪ್ತಿ, ಅಸಂತೋಷ, ಧಾವಂತ ಹುಟ್ಟಿಸುವುದಕ್ಕೆ ದ್ಯೂತಕ್ಕಿಂತಲೂ ಉತ್ತಮ ಸಾಧನ ಬೇರೊಂದಿಲ್ಲ. ಧರ್ಮರಾಯ ದ್ಯೂತವಾಡಿ ರಾಜ್ಯ, ಹೆಂಡತಿಯನ್ನೇ ಕಳೆದುಕೊಂಡನಂತೆ - ಸಿದ್ದೀಕಟ್ಟೆ ರಾಮರಾಯ ತನ್ನ ಮುರುಕಲು ಮನೆಯನ್ನೇತಕ್ಕೆ ಕಳೆದುಕೊಳ್ಳಬಾರದು ?

ಆದರೆ ದ್ಯೂತಕಾರರಲ್ಲಿ ಒಂದು ಮೆಚ್ಚತಕ್ಕ ಗುಣವಿದೆ. ಅವರು ಸಾಮಾನ್ಯವಾಗಿ 'ಚಿಲ್ಲರೆ ಸುಳ್ಳು' ಹೇಳುವುದಿಲ್ಲ. ಸಾಲ ಕೊಂಡು ಹೋದ ಹಣವನ್ನು ಹಿಂದಿರುಗಿಸುತ್ತಾರೆ. ಅವರ ಲೆಕ್ಕಾಚಾರದಲ್ಲಿ ಹೆಚ್ಚು ಕಡಿಮೆಯಾದರೆ ಮಾತ್ರ 'ಇಸಂ ಪರಾರಿ.'

ನಾನು ಈ ಚಟಗಳನ್ನೂ, ಚಟಗಾರರನ್ನೂ ಸಹಿಸಬಲ್ಲೆ. ನನ್ನ ಗೆಳೆಯವರ್ಗದಲ್ಲಿ ಖದೀಮ ಇಸ್ಪೇಟ್, ಕುದುರೆ ಜೂಜುಗಾರರಿದ್ದಾರೆ. ನನ್ನನ್ನು ಸುಸಂಸ್ಕೃತನನ್ನಾಗಿ ಮಾಡಬೇಕೆಂದು ಹಗಲಿರುಳು ಪ್ರಯತ್ನಿಸುತ್ತಿದ್ದಾರೆ. ಆದರೆ ಅವರ ದುರ್ದೈವ-ವಿಜಯಮಾಲೆ ಇನ್ನೂ ಅವರ ಕೊರಳನ್ನಲಂಕರಿಸಿಲ್ಲ.

ಇವು ಸಹ್ಯ ಚಟಗಳಾದರೆ - ಅ-ಸಹ್ಯ ಚಟಗಳು ಕೆಲವಿವೆ. ನಾಲ್ಕು ಗಂಟೆಗೆ ಬರುತ್ತೇನೆಂದು ಹೇಳಿ ಐದುಗಂಟೆಗೆ ಬರುವುದು ಅಥವಾ ಬರದೆಯೇ ಇರುವುದು. ಗೆಳೆಯನ ಹಾದಿ ನೋಡುತ್ತ ಕುಳಿತುಕೊಳ್ಳುವ ಕಣ್ಣಿನ ಗತಿಯೇನಾಗಬಹುದೆಂಬುದನ್ನು ವಿಚಾರಮಾಡಬೇಕು. ಬೆಳಗಾಗೆದ್ದು ಸಂಜೆಯ ತನಕ ೧ ರೂ. ೨ ರೂ. ಸಾಲಕ್ಕೆ ಬರುವುದು ಇತ್ಯಾದಿ. ಇತ್ಯಾದಿ.

ನನ್ನ ಗೆಳೆಯರು ಕೆಲವರಲ್ಲಿ ವಿಚಿತ್ರ ಚಟಗಳಿವೆ. ಇವುಗಳಿಂದ ಬಹಳ ಹಿಂಸೆಯೇನಿಲ್ಲ. ಆದರೆ ಮನಸ್ಸಿಗೆ ಕಿರಿಕಿರಿ.

ಒಬ್ಬರು ಪ್ರಸಿದ್ಧ ಗ್ರಂಥಕರ್ತರು. ಅವರ ಮನೆಗೆ ಹೋದಕೂಡಲೆ ಒಂದು ಕಪ್ ಚಹಾ ಕೊಟ್ಟು ಕೂಡಿಸುತ್ತಾರೆ. ಅಲ್ಲಿಂದ ಆರಂಭವಾಗುತ್ತದೆ ಅವರ ರೇಡಿಯೋ. ಏನು ಸಾಹಸ ಪರಾಕ್ರಮ; ಏನು ಆತ್ಮ ಪ್ರಶಂಸೆ!! ಎಷ್ಟುಹೊತ್ತು ಅವರು ತಮ್ಮ ವಿಚಾರ ಹೇಳಿಕೊಂಡರೂ ತೃಪ್ತಿಯೇ ಇಲ್ಲ. ಎಲ್ಲಾ ಸತ್ಯವೇ? ನಾಲಗೆ ಸ್ವೈರವೃತ್ತಿಯನ್ನವಲಂಬಿಸಿ ಹರಿದಾಡಹತ್ತಿದರೆ ಸತ್ಯಾಸತ್ಯ ಲೋಕಗಳ ಪರಿವೆ ಅದಕ್ಕಿರುತ್ತದೆಯೇ?

ಇನ್ನೊಬ್ಬ ಗೆಳೆಯರು ಬಹು ಒಳ್ಳೆಯ ಮನುಷ್ಯ. ಹೆಣ್ಣಿನ ಹೃದಯ. ಅವರ ಮನೆಗೆ ಹೋದಕೂಡಲೆ ಒಂದು ಮಗು ಎತ್ತಿಕೊಂಡು ಬಂದು ತೊಡೆಯ ಮೇಲೆ ಕೂಡಿಸಿಕೊಂಡು ಅದರ ರೂಪ, ಗುಣ, ಭವಿಷ್ಯ, ರೋಗ ವರ್ಣನೆನೆಯನ್ನು ಕೂಲಂಕಷವಾಗಿ ಒಪ್ಪಿಸುತ್ತಾರೆ. ಮಗುವಿಗೆ ಕಾಲ ಪ್ರವರ್ತಿಗೆ ಯಾವಾಗ ಕೊಟ್ಟದ್ದು, ಯಾವ ಔಷಧ ಕೊಟ್ಟದ್ದು, ಹೇಗಾ

ಯಿತು, ಎಷ್ಟು ಸಲವಾಯಿತು, ಯಾವ ಬಣ್ಣಕ್ಕೆ ಆಯಿತು, ಮುಂದೆ ಆದ ಪರಿಣಾಮ, ಅದನ್ನು ನಿಲ್ಲಿಸುವುದಕ್ಕೆ ಮಾಡಿದ ಮಹಾಕಾರ್ಯಗಳೆಲ್ಲಾ ಚಾ - ಚೂ ಬಿಡದೆ ಒಪ್ಪಿಸುತ್ತಾರೆ.

ಮತ್ತೊಬ್ಬ ಗೆಳೆಯರು ಬಹಳ ವಿನೋದಪ್ರಿಯರು. ಉತ್ತಮ ಮಾತುಗಾರರು. ಅವರು ಆಡಿದುದನ್ನು ಇತರರು ತಾಳ್ಮೆಯಿಂದ, ಶಾಂತತೆಯಿಂದ ಕೇಳಿಕೊಳ್ಳಬೇಕು. ಜತೆಯಲ್ಲಿದ್ದವರು ಏನಾದರೂ ಹೇಳಹತ್ತಿದರೆ- ಅದು ಮಹದ್ವಿಷಯವಾಗಿದ್ದರೂ - ಆ ಗೆಳೆಯರ ಸಂಗೀತ ಚಾಪಲ್ಯ ಕೆರಳುತ್ತದೆ. ಮೆಲ್ಲಗೆ ಗೊಣಗುಟ್ಟುವುದಕ್ಕೋ ಸಿಳ್ಳುಹಾಕುವುದಕ್ಕೋ ಆರಂಭಿಸುತ್ತಾರೆ.

ದುರಭ್ಯಾಸಗಳಲ್ಲಿ ಹಿರಿಯಸ್ಥಾನ ಆತ್ಮಪ್ರಶಂಸೆಗೆ ಕೊಡಬೇಕು. ಬಸವಣ್ಣನವರು 'ತನ್ನ ಬಣ್ಣಿಸಬೇಡ - ಇತರರ ಹಳಿಯಬೇಡ' ಎಂದಾಗ ಬಹುಜನಗಳ ಕೈಯಲ್ಲಿ ಸಿಕ್ಕಿ ನೊಂದಿರಬೇಕು. ಹೆಣ್ಣುಮಕ್ಕಳಲ್ಲಿ ನೋಡಬೇಕು ಈ ಗುಣ. ತಮ್ಮ ಸೀರೆ, ಒಡವೆ, ಗಂಡ, ಮನೆ, ಗಂಡನ ಆಫೀಸ್ ಅಧಿಕಾರ (ಅವನು ೧೫ ರೂಪಾಯಿ ಗುಮಾಸ್ತನೇ ಆಗಿದ್ದರೂ) ಎಷ್ಟು ಬಣ್ಣಿಸಿದರೂ ಅವರಿಗೆ ಸಾಲದು. ಆತ್ಮಪ್ರಶಂಸೆಮಾಡಿಕೊಳ್ಳುವಾಗ ಕೇಳುವವರು ಏನೆಂದುಕೊಂಡಾರು ಎಂಬುದರ ಕಡೆ ಲಕ್ಷ್ಯ ಕಡಿಮೆ.

ದುರಭ್ಯಾಸ ಇಲ್ಲದ ಮನುಷ್ಯ ಶುಂಭ, ಸನ್ಯಾಸಿ ಅಥವಾ ಜೀವನ್ಮುಕ್ತನಾಗಿರಬೇಕು. ಆದರೆ ತಮ್ಮ ಅಭ್ಯಾಸಗಳಿಂದ ಇತರರು ಕಿವಿ, ಕಣ್ಣು, ಮೂಗು ಮುಚ್ಚುವಂತಾಗುವುದೇ ಎಂದು ವಿಚಾರಮಾಡಿಕೊಂಡರೆ ಸಾಕು. ಜನರ ಬಾಳುವೆಗೆ ಒಂದು ಕಣ ಬೆಳಕು ಬಂದೀತು.

———

## ೧೨. ಮಕ್ಕಳು

ಜಗತ್ತಿನ ಸಾಹಿತ್ಯ ದಿಗ್ದರ್ಶನ ಮಾಡುವಾಗ ಹೊಳೆಯುವ ಒಂದು ಮುಖ್ಯ ಸಂಗತಿಯೆಂದರೆ ಮಕ್ಕಳಿಗೆ ದೊರೆತಿರುವ ಪ್ರಾಧಾನ್ಯ. ತಾಯಿ-ಮಗು ಕಲ್ಪನೆ ಎಲ್ಲ ದೇಶಗಳಲ್ಲಿಯೂ, ಎಲ್ಲ ಧರ್ಮಗಳಲ್ಲಿಯೂ ಮಾನ್ಯತೆ ಪಡೆದಿದೆ. ಕ್ರಿಸ್ತರ 'ಮ್ಯಾಡೊನಾ ಮತ್ತು ಮಗು' ವಸ್ತುವನ್ನೆತ್ತಿ ಕೊಂಡು ಚಿತ್ರ ಬರೆಯದಿರುವ ಕ್ರಿಸ್ತ ಚಿತ್ರಗಾರನಿಲ್ಲ. 'ಯಶೋಧಾ-ಕೃಷ್ಣ' 'ಪಾರ್ವತಿ-ಗಣೇಶ' ವಸ್ತುಗಳು ಭಾರತೀಯ ಚಿತ್ರಗಾರರ ಪ್ರೀತಿಯ ವಸ್ತುಗಳಾಗಿವೆ.

ಶೈಶವಾವಸ್ಥೆಗೆ ಹಿಂದುಗಳು ಬಹಳ ಬೆಲೆ ಕೊಟ್ಟಿದ್ದಾರೆ. ಐದು ವರ್ಷದ ತನಕ ಮಗು ದೇವರಿದ್ದ ಹಾಗೆ. ಅದು ಏನು ಮಾಡಿದರೂ ಅಪವಿತ್ರವಲ್ಲ ಎಂಬ ಭಾವನೆ ಪರಮ ಕಟುಧರ್ಮಿಗಳಲ್ಲಿಯೂ ಹಬ್ಬಿದೆ. ಮಮತೆಯ ಮೂರ್ತಿಗಳಾದ ಮಕ್ಕಳು ನಿರುದ್ದೇಶದಿಂದ ಮಾಡುವ ತುಂಟತನ ಮಾನವರ ದುರಂತ ಜೀವನದ ಮೇಲೆ ಸುಳಿಯುವ ಬೆಳದಿಂಗಳು. ತಮ್ಮ ಆಯುಷ್ಯದ ಅತ್ಯಮೂಲ್ಯ ವೇಳೆಯನ್ನೆಲ್ಲಾ ಸೆರೆಮನೆಯಲ್ಲಿ ಕಳೆದಿರುವ ಪಂಡಿತ ಜವಾಹಿರಲಾಲ ನೆಹ್ರೂ ಅವರು ಸೆರೆಮನೆ ಏತಕ್ಕೆ ವಿಕರ್ಷಕವೆಂದು ವರ್ಣಿಸುತ್ತಾ 'ಅಲ್ಲಿ ಹೆಣ್ಣಿನ ನೂಪುರ ಧ್ವನಿ ಕೇಳಬರುವುದಿಲ್ಲ, ಮಕ್ಕಳ ನಗೆಯ ಬೆಳುದಿಂಗಳು ಪಸರಿಸುವುದಿಲ್ಲ - ಅದಕ್ಕಾಗಿ' ಎಂದು ಹೇಳುತ್ತಾರೆ. ಮಿಸಸ್ ಸದೆ ಎಂಬ ಕವಯಿತ್ರಿ 'ನೊಂದು, ಬೆಂದು,

ಬೇಸತ್ತಾಗ ಕಳೆದುಹೋದ ಶೈಶವ್ಯ ಮತ್ತೆ ಬರಬಾರದೇ ಎಂದು ನಾನು ಎಷ್ಟು ಸಲ ಬಯಸಿಲ್ಲ' ಎಂದು ಹೇಳಿದ್ದಾಳೆ.

ಮನುಷ್ಯನ ಮನಸ್ಸು ವಯಸ್ಸಾಗುತ್ತ ಆಗುತ್ತ ರಾಗದ್ವೇಷಗಳ ಹುತ್ತವಾಗುತ್ತ ಬರುತ್ತದೆ. ಅದು ಸರಳತೆ, ಕೋಮಲತೆ, ಕಾರುಣ್ಯ, ಅನುಕಂಪಾದಿ ಗುಣಗಳನ್ನು ಕಳೆದುಕೊಂಡು ರೋಷ ದ್ವೇಷಗಳ ಜ್ವಾಲಾಮುಖಿಯಾಗತೊಡಗುತ್ತದೆ. ಆ ಸ್ಥಿತಿಯಲ್ಲಿ ಮನುಷ್ಯ - ವಿಚಾರಪರನಾಗಿದ್ದರೆ - ತನ್ನ ಶೈಶವ್ಯದ ದಿವ್ಯದಿನಗಳನ್ನು ಸ್ಮರಿಸಿಕೊಳ್ಳುತ್ತಾನೆ. ತನ್ನ ಮಕ್ಕಳ - ಇತರರ ಮಕ್ಕಳ ನಿರ್ಹೇತುಕ ಆಟಪಾಟಗಳನ್ನು ನೋಡಿ ಬಾಳಮಂದಾರ ಅರಳುವ ಸೊಗಸನ್ನು ಕಂಡು ಮನಸ್ಸಿಗೆ ಶಾಂತಿ, ಮುದ ತಂದುಕೊಳ್ಳುತ್ತಾನೆ.

ಜೀವನದಲ್ಲಿ ಮಗುವಿಗಿರುವ ಪ್ರಾಧಾನ್ಯಕ್ಕೆ ಆ ಬಗ್ಗೆ ಬೆಳದಿರುವ ನಾಣ್ಣುಡಿಗಳ ಮಾಲೆಯನ್ನು ಗಮನಿಸಿದರೆ ಸಾಕು. 'ಮಕ್ಕಳಿಲ್ಲದ ಸಿರಿ ಕೊಳೆತ ತೆಂಗಿನಕಾಯಿ' - 'ಒಕ್ಕಲಿಲ್ಲದ ಊರು, ಮಕ್ಕಳಿಲ್ಲದ ಮನೆಯು ಫಲವೇನು?' - 'ಹಲವು ಮಕ್ಕಳ ತಂದೆ, ತಲೆಯಲ್ಲಿ ಕೊಟ್ಟವಗೆ' - 'ಪುತ್ಥಳಿಗಿಂತ ಮೇಲುಬಂಗಾರವಿಲ್ಲ, ಮಕ್ಕಳಿಗಿಂತ ಮೇಲುತೊದಲಿಲ್ಲ' - 'ಪಕ್ಷಿಗೆ ಗೂಡು, ಮಕ್ಕಳಿಗೆ ತಾಯಿ' - 'ಹಕ್ಕಿಯಿಲ್ಲದ್ದು ತೋಟವಲ್ಲ, ಮಕ್ಕಳಿಲ್ಲದ್ದು ಮನೆಯಲ್ಲ' - 'ಮಕ್ಕಳ ಬಾಯಿಗೆ ಮಣ್ಣುಸವಿ' - 'ಮಕ್ಕಳ ಹೊಲಸು ತಿನ್ನುವವಳು ತುಪ್ಪದ ಗಸಿ ಬಿಟ್ಟಾಳೇ' - 'ಮಕ್ಕಳಿಗೆಲ್ಲ ಬೆಕ್ಕಿನ ಪಳಿದ್ಯವೇ?' - 'ಮಕ್ಕಳ ಬಾಯಿಗೆ ಹಣ್ಣುಕೊಟ್ಟು, ಮಣ್ಣು ಬಿಡಿಸಬೇಕು' - 'ಮಕ್ಕಳಿಲ್ಲದವರಿಗೆ ಒಕ್ಕಳ ಹೊನ್ನಿದ್ದರೇನು' - 'ಮಕ್ಕಳಿಲ್ಲದವನಿಗೆ ಹೆಂಡತಿ ಮುದ್ದು, ಹೆಂಡತಿಯಿಲ್ಲದವನಿಗೆ ತಾನೇ ಮುದ್ದು' - 'ಮಕ್ಕಳಿಲ್ಲವೆಂದು ಮೈಲಾರಕ್ಕೆ ಹೋದರೆ ಮೈಯೆಲ್ಲಾ ಇಳಿದು ಹೋಯಿತು' - 'ಯಾವ ದೇವರು ವರಾ ಕೊಟ್ಟರೂ ಗಂಡನಿಲ್ಲದೆ ಮಕ್ಕಳಾಗದು' - 'ಮಕ್ಕಳಿಲ್ಲ ಮನೆವಾರ್ತೆ ಮಾಡಿದರೆ ಅಪ್ಪನಿಗೇತಕ್ಕೆ ಇಬ್ಬರು ಹೆಂಡಿರು' - ಇತ್ಯಾದಿ.

ತಾಯಿ ಮಕ್ಕಳ ಸಂಬಂಧ ದೈವಿಕವಾದುದು. 'ಲೋಕದಲ್ಲಿ ಅನೇಕ ಅಯೋಗ್ಯ ತಂದೆಗಳು ಸಿಕ್ಕಬಹುದು. ಆದರೆ, ಒಬ್ಬ ಕೆಟ್ಟ ತಾಯಿ

ಸಿಕ್ಕುವುದು ದುರ್ಲಭ.' ಹೆಣ್ಣಿನ ಬಾಳಿನ ಮಹತ್ವದ ಆಸೆಯೆಂದರೆ ಮಗುವಿನ ತಾಯಿಯಾಗಿ, ಅದನ್ನು ಲಾಲಿಸಿ ಪಾಲಿಸಬೇಕೆಂಬುದು. ಬಂಜೆ ತನದ ದುಃಖಕ್ಕಿಂತ ಹಿರಿದಾದ ದುಃಖ, ಯಾತನೆ ಹೆಣ್ಣುಬಾಳಿಗೆ ಬೇರೊಂದಿಲ್ಲ. ತನ್ನ ಮಗುವಿನ ಮುಖಾರವಿಂದವನ್ನು ನೋಡಿ ತಾಯಿ ಯಾವ ದುಃಖವನ್ನು ಬೇಕಾದರೂ ಮರೆಯಬಲ್ಲಳು. ಮಕ್ಕಳಾಗದಿರುವ ಹೆಣ್ಣಿನ ಬಾಳು ಸಮಾಜದಲ್ಲಿ ಬಹು ಕೀಳು. ಭಿಕ್ಷುಕರು ಆಕೆಯ ಕೈಯಿಂದ ಭಿಕ್ಷೆಯನ್ನು ಕೂಡ ಸ್ವೀಕರಿಸರು. ಶುಭ ಶೋಭನಾದಿ ಪ್ರಸಂಗಗಳಲ್ಲಿ ಆಕೆ ಹೊಲತಿಯಂತೆ ಹೊರಗೆ ನಿಂತಿರಬೇಕಾಗುತ್ತದೆ.

ಬಂಜೆತನದ ಕಷ್ಟನಷ್ಟಗಳನ್ನು ಜನಪದ ಸಾಹಿತಿಗಳಷ್ಟು ಹೃದಯಂಗಮವಾಗಿ ಯಾರೂ ಬಣ್ಣಿಸಿಲ್ಲ. ಬೇರೆ ಯಾವ ಹವ್ಯಾಸವನ್ನೂ ಕಾಣದ ಹಳ್ಳಿಯ ಹೆಣ್ಣುಮಕ್ಕಳು ಈ ಶೂಲದ ಇರಿತವನ್ನು ಹೇಗೆ ಅನುಭವಿಸುತ್ತಾರೆಂಬುದನ್ನು ಕೆಲವು ಗೀತೆಗಳಲ್ಲಿ ಕಾಣಬಹುದು.

" ಬಾಲಕರಿಲ್ಲದ ಬಾಲಿದ್ಯಾತರ ಜನ್ಮ
ಬಾಡೀಗಿ ಎತ್ತು ದುಡಿದಂಗ । ಬಾಳಿಲೆಯ
ಹಾಸ್ಯುಂಡು ಬೀಸಿ ಒಗೆದಂಗ ॥

ಕಂದನ ಕುಡು ಶಿವನೆ ಬಂಧನ ಬಿಡಲಾರೆ
ಹಂಗೀನ ಬಾನ ಉಣಲಾರೆ । ಮರ್ತ್ಯದಾಗ
ಬಂಜೆಂಬ ಶಬುದ ಹೊರಲಾರೆ ॥

ಬಂಜಿ ಬಾಗಿಲ ಮುಂದ ಬಂಗಾರದೊಳಕಲ್ಲ
ಬಂದು ಕುಟ್ಯಾಕ ಸೊಸಿಯಿಲ್ಲ । ಮಾನೌಮಿ
ಬನ್ನಿ ಮುಡಿಯಾಕ ಮಗನಿಲ್ಲ ॥

ಬಂಜಿ ಬಾಗಿಲ ಮುಂದ ಅಂಜೂರಿ ಗಿಡಹಟ್ಟಿ
ಟೊಂಗಿ ಟೊಂಗೆಲ್ಲ ಗಿಣಿ ಕೂತು । ಹೇಳ್ಯಾವ
ಬಂಜಿ ನಿನ ಬದಕ ಹೆರವರಿಗೆ ॥

(ಗರತಿಯ ಹಾಡು)

ಮಕ್ಕಳಿಲ್ಲದ ಬಂಜೆ ಹೊಕ್ಕು ನಂಜನಗೂಡು
ಕಪ್ಪು ಗೊರವಯ್ಯ ಕೈ ಹಿಡಿದು। ಏನೆಂದ
ಪಟ್ಟಿ ಉಡು ಮಗಳೆ ಫಲವಿಲ್ಲ ॥
ಪಟ್ಟಿ ಉಟ್ಟ್ವಾರೇನು ಮುತ್ತು ಕೊಟ್ವಾರೇನು
ಹೊಟ್ಟೇಲಿ ಒಂದು ಫಲವಿಲ್ಲ। ಮೇಲೇನು
ಪಟ್ಟಿ ಉಟ್ಟುದಕೆ ಫಲವೇನು ॥

(ಹಳ್ಳಿಯ ಹಾಡುಗಳು)

ಮಕ್ಕಳಿಲ್ಲದ ಮನೆಯು ಪಕ್ಕಿಯಿಲ್ಲದ ವನವು
ದಿಕ್ಕಿಲ್ಲದವನ ಸಂಸಾರ ಕಳಸು ಮನೆ
ಹೊಕ್ಕು ಹೋದಂತೆ ಸರ್ವಜ್ಞ ॥
ಅಂದವಿಲ್ಲದ ದುಸ್ತು ಹೆಂದರಿಲ್ಲದ ಮದುವೆ
ಕಂದನಿಲ್ಲದವಳ ಮನೆವಾರ್ತೆಯಿವು ಮೂರು
ಕುಂದು ಕಾಣಯ್ಯ ಸರ್ವಜ್ಞ ॥
ಮೊಸರು ಇಲ್ಲದ ಊಟ ಕೆಸರು ಇಲ್ಲದ ಗದ್ದೆ
ಬಸುರಾಗದವಳ ಬಾಳುವೆಯು ಬೇಸಿಗೆಯ
ಬಿಸಿಲು ಕಾದಂತೆ ಸರ್ವಜ್ಞ ॥
ರೊಕ್ಕವಿಲ್ಲದ ಬಾಳ್ವೆ ಮಕ್ಕಳಿಲ್ಲದ ಮನೆಯು
ಅಕ್ಕರಿಲ್ಲದ ತವರೂರು ಇವು ಮೂರು
ದುಕ್ಕ ಕಾಣಯ್ಯ ಸರ್ವಜ್ಞ ॥

(ಸರ್ವಜ್ಞನ ತ್ರಿಪದಿಗಳು)

ಬಂಜೆತನದ ಕಳಂಕವನ್ನು ಹೋಗಲಾಡಿಸಿಕೊಳ್ಳುವುದಕ್ಕೆ ಸ್ತ್ರೀಯರು ಏನು ಮಾಡಲೂ ಸಿದ್ಧರಿರುತ್ತಾರೆ. ಪೂಜೆ, ಪುರಸ್ಕಾರ, ಯಾತ್ರೆಗಳಂತೂ ಸರಿಯೇ ಸರಿ. ಮದ್ದು, ಮಾಟ, ಮಂತ್ರಾದಿಗಳೂ ನಿರಂತರವಾಗಿ ನಡೆಯುತ್ತವೆ. ಮಕ್ಕಳ ಭಾಗ್ಯದ ಸಲುವಾಗಿ ಕೆಲವು ಸ್ತ್ರೀಯರು ಶೀಲವನ್ನೂ ತ್ಯಜಿಸಲಂಜುವುದಿಲ್ಲ. ಕೆಲವು ಮಠಾಧಿಪತಿಗಳು 'ಮಕ್ಕಳ ಫಲ'ವನ್ನು ಕೊಡುವ ವ್ಯವಹಾರವನ್ನೇ ಅವರ ಸಲುವಾಗಿ ನಡಸುತ್ತಾರೆ.

ಇಷ್ಟೆಲ್ಲ ಅವಸ್ಥೆ ಅನುಭವಿಸಿ ಪಡೆಯುವ ಪುತ್ರರತ್ನ - ನೀಚನೋ ಅಯೋಗ್ಯನೋ ಲೋಕಕಂಟಕನೋ ಆದರೆ ಫಲವೇನು? ಕ್ರಿಸ್ತ, ರಾಮಾನುಜ, ರಾಮಕೃಷ್ಣ ಪರಮಹಂಸ, ಗಾಂಜೀಜಿಯವರ ತಾಯಿಂದಿರನ್ನು ನಾವು ಹೇಗೆ ಸ್ಮರಿಸಿ ಪುರಸ್ಕರಿಸುತ್ತೇವೆಯೋ ಹಾಗೆ ಹಿಟ್ಲರ್, ಮುಸಲೂನಿ, ಚರ್ಚಿಲ್, ಅಮೆರಿಗಳ ತಾಯಿಂದಿರನ್ನು ಶಪಿಸುತ್ತೇವೆ.

ಮಕ್ಕಳು ಲೋಕಪೂಜಕರೂ, ಕಂಟಕರೂ ಆಗುವುದು ತಾಯಿತಂದೆಗಳನ್ನು ಅವಲಂಬಿಸುತ್ತದೆ. ವಿಚಾರಮಾಡಿದರೆ ಮಕ್ಕಳ ತಪ್ಪಿಗೆಲ್ಲಾ ಅವರ ತಾಯಿತಂದೆಗಳನ್ನು ಶಿಕ್ಷಿಸಬೇಕು. ಮನೆಯನ್ನೇ ಯೋಗ್ಯ ಶಿಕ್ಷಣ ಕ್ಷೇತ್ರವಾಗಿ ಅಳವಡಿಸದೆ, ಕಾಟ ತಪ್ಪಿದರೆ ಸಾಕೆಂದು ಮಕ್ಕಳನ್ನು ಹೊರ ದೂಡುವ ಮಾತಾಪಿತರು ಲೋಕಕ್ಕೆ ದೊಡ್ಡ ಅಪಕಾರಮಾಡುತ್ತಾರೆ.

ತಾಯಿತಂದೆಗಳ ಪ್ರಭಾವದಿಂದ ಮುಂದೆ ಬಂದ ಮಕ್ಕಳ ಇತಿಹಾಸ ಪುರಾಣಪ್ರಸಿದ್ಧವಾಗಿದೆ. ಸತ್ಯಕಾಮ ಜಾಬಾಲಿ ತಾಯಿಯ ನುಡಿಯಂತೆ, ತನ್ನ ಹೇಯ ಹುಟ್ಟನ್ನೂ ಮುಚ್ಚಿಡಲಿಲ್ಲ. ಗುರುವಿಗೆ ಅವನ ಸತ್ಯಕಥೆ ಹೃದಯಕ್ಕೆ ನಾಟಿತು. ಜಾಬಾಲಿಪುತ್ರ ಮಹರ್ಷಿ ಸತ್ಯಕಾಮನಾದ. ತಾಯಿಯ ತೊಡೆಯ ಮೇಲೆ ಆಕೆಯ ಅಮೃತ ಉಪದೇಶದಿಂದ ಬೆಳೆದ ಶಿವಾಜ ಹಿಂದೂ ಧರ್ಮೋದ್ಧಾರಕನಾದ. ಸ್ವಾಮಿ ವಿವೇಕಾನಂದರ ಜೀವನವನ್ನು ರೂಪುಗೊಳಿಸಿದ ಮಹಾಶಿಲ್ಪಿ ಅವನ ತಾಯಿ.

ಈ ಬಗ್ಗೆ ಪರ್ಶಿಯಾ ಸಾಹಿತ್ಯದಲ್ಲಿ ಒಂದು ಸುಂದರ ಕತೆಯಿದೆ. ಪ್ರವಾಸಿಯಾಗಿ ಹೋಗಲಿದ್ದ ಮಗನ ಅಂಗಿಯ ಒಳಗೆ ತಾಯಿ ೧೬ ಚಿನ್ನದ ನಾಣ್ಯಗಳನ್ನು ಹೊಲಿದು ಹೇಳಿದಳಂತೆ "ಮಗೂ, ಏನೇ ಬಂದರೂ ಸುಳ್ಳು ಹೇಳಬೇಡ." ದಾರಿಯಲ್ಲಿ ಹೋಗುತ್ತ ಮಗ ಕಳ್ಳಕಾಕರ ಕೈಗೆ ಸಿಕ್ಕಿಬಿದ್ದ. ಅವರು ಕೇಳಿದರು

"ನಿನ್ನ ಹತ್ತಿರ ಏನಿದೆ?"

ನಿರ್ವಂಚನೆಯಿಂದ ಮಗ ಹೇಳಿದ

"ಅಂಗಿಯ ಒಳಗೆ ತಾಯಿ ೧೬ ಚಿನ್ನದ ನಾಣ್ಯಗಳನ್ನು ಹೊಲಿದಿದ್ದಾಳೆ."

ಕಳ್ಳರು ನಂಬದೆ ಅವನನ್ನು ತಮ್ಮ ಯಜಮಾನನ ಮುಂದೆ ಒಯ್ದು ನಿಲ್ಲಿಸಿದರು. ಅವನು ಪ್ರಶ್ನಿಸಿದ

"ನಾಣ್ಯ ಇರುವುದು ನಿಜವೇ ?"

"ಸತ್ಯ - ತಾಯಿ ಹೇಳಿದ್ದಾಳೆ ಸುಳ್ಳು ಹೇಳಬಾರದೆಂದು."

ಯಜಮಾನ ಅಂಗಿ ಬಿಚ್ಚಿಸಿ ನೋಡಿದ. ನಾಣ್ಯಗಳಿದ್ದವು. ಅವನ ಮುಖ ಕಳೆಗುಂದಿತು.

"ಇಷ್ಟು ಚಿಕ್ಕವನೇ ಇಂತಹ ನ್ಯಾಯಮಾರ್ಗವನ್ನು ಹಿಡಿದಿರುವಾಗ ನಾನು ಹೇಗಿರಬೇಕು. ನಾನು ಮಾಡುತ್ತಿರುವುದು ದೈವದ್ರೋಹ."

ಎಂದು ಪಶ್ಚಾತ್ತಾಪಪಟ್ಟು ಸನ್ಮಾರ್ಗಾವಲಂಬಿಯಾದನಂತೆ.

ಉತ್ತಮ ವಚನ, ಉತ್ತಮ ಆದರ್ಶ ಅಟಾಮಿಕ್ ವೇಗದಲ್ಲಿ ಹರಿದು ಮಂದಿಯ ಮನಸ್ಸನ್ನು ತಿದ್ದುತ್ತದೆ.

ಮಕ್ಕಳನ್ನು ಲೋಕಕ್ಕೆ ತಂದು, ಸಮಾಜದ ನೊಗದ ಮೇಲೆ ಅವುಗಳ ಭಾರವನ್ನು ಹೇರುವುದು ದೊಡ್ಡ ವಿಷಯವಲ್ಲ. ಅವರನ್ನು ಯೋಗ್ಯ ಸಾಮಾಜಿಕರನ್ನಾಗಿ ಮಾಡಿ, ಅವರಿಂದ ಲೋಕಕ್ಕೆ ಉಪಕಾರವಾಗದಿದ್ದರೂ ಅಪಕಾರವಾಗದಂತೆ ನೋಡಿಕೊಳ್ಳಬೇಕಾದುದು ತಾಯಿತಂದೆಗಳ, ಗುರು ಹಿರಿಯರ, ಉತ್ತರವಾದಿತನವುಳ್ಳ ಸರ್ಕಾರದ ಕರ್ತವ್ಯ.

———

## ೧೩. ಗ್ರಂಥವಿಮರ್ಶೆ

"ಜೀವನಸೌಂದರ್ಯ ಮತ್ತು ಸಾಹಿತ್ಯ" ಗ್ರಂಥವನ್ನು ಪ್ರಕಟಿಸಿ ಶ್ರೀಮಾನ್ ಡಿ. ವಿ. ಗುಂಡಪ್ಪನವರು ಕನ್ನಡಿಗರಿಗೆ ಮಹೋಪಕಾರ ಮಾಡಿದ್ದಾರೆ. ಉಪಕಾರದ ಜತೆಗೆ ಅಂಜಿಕೆಯನ್ನೂ ಹುಟ್ಟಿಸಿದ್ದಾರೆ. ಸಾಹಿತ್ಯ ವಿಮರ್ಶೆ ಇಷ್ಟು ಕಠಿಣವಾದುದೇ - ಸಾಹಿತ್ಯ ವಿಮರ್ಶೆ ಮಾಡುವುದಕ್ಕೆ ಇಂತಹ ಪಾಂಡಿತ್ಯ, ವಾದಸರಣಿ, ತೂಕ ಬೇಕೇ ಎಂದು ವಿಚಾರ ಮಾಡುವಂತೆ ಮಾಡಿದ್ದಾರೆ. ವಿಮರ್ಶೆಗೆ ಕೈಹಾಕುವವರು ಆ ಗ್ರಂಥವನ್ನು ಹಲವು ಸಾರಿ ಓದುವುದೊಳ್ಳೆಯದು.

ಶ್ರೀ ಡಿ. ವಿ. ಗುಂಡಪ್ಪನವರು ತೋರಿದ ದಾರಿ ಹಿರಿಯ ದಾರಿ. ಅವರ ನೋಟದ ನಿಲವು ಬಹಳ ಎತ್ತರದ್ದು. ಅದಕ್ಕೇ ಕನ್ನಡಿಗರು ಅವರ ಮಾರ್ಗವನ್ನು ಅನುಸರಿಸುವ ಪ್ರಯಾಸಕಾರ್ಯಕ್ಕೆ ಕೈಹಾಕಲಿಲ್ಲ.

ಸ್ವತಂತ್ರ ಸಾಹಿತ್ಯದ ಚರಣದಾಸಿಯಾಗಿ ವಿಮರ್ಶೆ ಕೆಲವು ದಿನ ಬಾಳುವೆ ನಡೆಸಿತು. ಅದಕ್ಕೆ ಸ್ವತಂತ್ರವೇದಿಕೆಯನ್ನು ಕಟ್ಟಿಕೊಟ್ಟು ಆಂಗ್ಲ ಮತ್ತು ಫ್ರೆಂಚ್ ವಿಮರ್ಶಕರಾದ ಸೇಂತ್ ಬ್ಯಾವ್ ಸೇಂಟ್ಸ್‌ಬರಿ, ಮ್ಯಾಥ್ಯೂ ಆರ್ನಾಲ್ಡ್, ಅನತೋಲ್ ಫ್ರಾನ್ಸ್, ಸಿಮಂಡ್ಸ್, ಬ್ರ್ಯಾಡ್ಲೆ, ಪೇಟರ್, ಆಸ್ಕರ್ ವೈಲ್ಡ್ ಮೊದಲಾದವರು ಕ್ರಿಯಾಶಾಲಿಯಾದ ಲೇಖನ ಅಂತರಂಗವನ್ನು ಹೊಕ್ಕು ಅವನು ಅನುಭವಿಸಿದ - ಅನುಭವಿಸಲಿದ್ದ ಭಾವನೆಗಳನ್ನು ಹೊರಗೆಳೆದು, ಅವುಗಳಿಗೆ ಒಂದು ಕಲಾರೂಪವನ್ನು ಹೊದೆಸಿ ಹೊರಗಿಡಬೇಕಾದರೆ ವಿಮರ್ಶಕ ಲೇಖಕನಷ್ಟೇ ಪ್ರತಿಭಾಶಾಲಿಯಾಗಿರಬೇಕು.

ಷೆಲ್ಲಿಯ ಬಗ್ಗೆ ಖಂಡಿತವಾಗಿ ನುಡಿದ ಮ್ಯಾಥ್ಯೂ ಆರ್ನಾಲ್ಡ್, ಷೇಕ್ಸ್‌ಪಿಯರನ ಬಗ್ಗೆ ತೀಕ್ಷ್ಣವಾಗಿ ನುಡಿದ ಬರ್ನಾರ್ಡ್ ಷಾ ಇಬ್ಬರೂ ಪ್ರತಿಭಾಶಾಲಿಗಳಾದ ಲೇಖಕರು. ವಿಮರ್ಶಕ ಕಾವ್ಯಸೌಂದರ್ಯಕ್ಕೆ ಚಿನ್ನದ ಕಟ್ಟುಹಾಕಿ ನಮ್ಮ ಕೈಗೆ ಕೊಡುವುದು ಮಾತ್ರವಲ್ಲದೆ, ಕಾವ್ಯದ ಸುಪ್ತ ಸೌಂದರ್ಯವನ್ನು ಜಾಗ್ರತಗೊಳಿಸುತ್ತಾನೆ. ಕಾವ್ಯ ನಮ್ಮ ಮನಸ್ಸಿನಲ್ಲಿ ಏಳಿಸುವ ಭಾವನಾತರಂಗಗಳನ್ನು ಪರಿಷ್ಕಾರವಾಗಿ ಹೊರಗಿಡುತ್ತಾನೆ. ಕಾವ್ಯರಚನೆಗೆ ಬೇಕಾಗುವಷ್ಟೇ ಪ್ರತಿಭೆಯೇ ವಿಮರ್ಶೆಗೂ ಬೇಕೆಂಬುದು ಖಚಿತವಾಗುತ್ತದೆ.

ವಿಮರ್ಶಕ ಕೆಲವುಸಲ ತನ್ನ ಎಲ್ಲೆಯನ್ನು ಕವಿಯ ಎಲ್ಲೆಗೆ ಹೊಂದಿಸಿಕೊಂಡು ಅಲ್ಲಿಯೇ ನಿಲ್ಲುತ್ತಾನೆ. ಕೆಲವುಸಲ ಅದಕ್ಕೂ ಮುಂದೆಹೋಗಿ ಕವಿ ಹೊಕ್ಕು ಬಳಸದಿರುವ ಜಗತ್ತಿಗೂ ನಮ್ಮನ್ನು ಒಯ್ಯುತ್ತಾನೆ. ಪೇಟರ್ ಪ್ರಸಿದ್ಧ ಗ್ರೀಕ್ ಚಿತ್ರಕಾರರ ಮೇಲೆ ಬರೆಯುತ್ತಾ, ನಿಜವಾಗಿಯೂ ಚಿತ್ರಕಾರರ ಮನಸ್ಸಿನಲ್ಲಿ ಈ ಭಾವನೆಗಳೆಲ್ಲಾ ಬಂದಿದ್ದವೇ ಎಂದು ನಾವು ಶಂಕಿಸುವಂತೆ ಮಾಡುತ್ತಾನೆ. ಕೆಲವುಸಲ ಅಲ್ಪಕವಿಗಳು ಉತ್ತಮ ವಿಮರ್ಶಕನ ಕೈಗೆ ಸಿಕ್ಕಿ ಅಮರತ್ವವನ್ನೂ ಪಡೆಯುತ್ತಾರೆ.

ವಿಮರ್ಶಕ ಇನ್ನೊಂದು ಜಾಡು ಮಾಡಿಕೊಳ್ಳುತ್ತಾನೆ. ಕಾವ್ಯ ತನ್ನ ಮನಸ್ಸಿನ ಮೇಲೆ ಉಂಟುಮಾಡಿದ ಪರಿಣಾಮವನ್ನು ಚಿತ್ರಿಸುತ್ತಾ ಅವನು ಅದರ ಅನೇಕ ನ್ಯೂನತೆಗಳನ್ನುಎತ್ತಿ ತೋರಿಸುತ್ತಾನೆ. ಒಂದೇಭಾವನೆ ಎರಡು ಮನಸ್ಸಿನ ಮೇಲೆ ಮೂಡಿದಾಗ ಆಗುವ ಬೇರೆ ಬೇರೆ ಪ್ರತಿಕ್ರಿಯೆಯ ರೂಪ ಲಕ್ಷಣಗಳನ್ನು ಕವಿ, ವಿಮರ್ಶಕ ಇವರ ಕೃತಿಗಳಲ್ಲಿ ಕಾಣಬಹುದು. ಇಂತಹ ವಿಮರ್ಶಕ ಅಭಿಮಾನಿಯೂ ಅಲ್ಲ, ದಯಾದಾಕ್ಷಿಣ್ಯಪರನೂ ಅಲ್ಲ.

ಕನ್ನಡ ವಿಮರ್ಶಕರು ಈ ಮಾರ್ಗಗಳ ಹೊಸಲಿನ ಮೇಲೆ ನಿಂತು ಒಳಗೂ ಹೋಗಲಾರದೆ, ಹೊರಗೂ ಬರಲಾರದೆ ತೊಳಲುತ್ತಿದ್ದಾರೆ.

ಕನ್ನಡದಲ್ಲಿ ಸಶಾಸ್ತ್ರೀಯವಾಗಿ ವಿಮರ್ಶೆ ಮಾಡುವ ಒಂದು ಪತ್ರಿಕೆಯೂ ಇಲ್ಲ. ಇದೊಂದು ದೊಡ್ಡ ಕೊರತೆ. ಇರುವ ಪತ್ರಿಕೆಗಳಲ್ಲಿ ವಿಮರ್ಶೆಯ ಭಾಗ ಹಲವು ಹನ್ನೊಂದು ಭಾಗಗಳಲ್ಲಿ ಮತ್ತೊಂದು. ಒಂದೊಂದು ಪತ್ರಿಕೆಗೆ ಒಂದೊಂದು ಬಳಗ - ಗುಂಪು. ಆ ಗುಂಪಿನ ಜನ

ಬರೆದದ್ದೆಲ್ಲಾ ಮಹಾಕಾವ್ಯ - ಮಹಾಕೃತಿ. ಆ ಗುಂಪಿಗೆ ವಿರುದ್ಧವಾಗಿರುವವರು ಬರೆದದ್ದೆಲ್ಲಾ 'ಕಾವ್ಯ ದ್ರೋಹ.' ಮೊನ್ನೆತಾನೆ ಹಿರಿಯರ ಕಾವ್ಯವೊಂದನ್ನು ಮತ್ತೊಬ್ಬ ಹಿರಿಯರು ಒಂದು ಇಂಗ್ಲಿಷ್ ಪತ್ರಿಕೆಯಲ್ಲಿ ವಿಮರ್ಶಿಸಿದರು. ಅದನ್ನು ಪೂರ್ತಿ ಓದಿದವರೂ, ಮೆಚ್ಚಿದವರೂ ಅವರೊಬ್ಬರೇ. ಗ್ರಂಥವನ್ನು 'ಮಹಾಕಾವ್ಯ'ವೆಂದರು. ನೋಡಿದವರ ಇದು 'ಸಾಹಿತ್ಯ ವಿಮರ್ಶೆಯಲ್ಲ' 'ಸಾಹಿತ್ಯಾಭಾಸ' ಎಂದರು.

ಕನ್ನಡ ಪತ್ರಿಕೆಗಳ ಮೇಲ್ಪಂಕ್ತಿ 'ಇಂಥವರು ಬರೆದಿರುವುದರಿಂದ ಇದು ಉತ್ತಮ! ಗ್ರಂಥವೇ ಆಗಿದೆ.' ಹೇಗೆ ಆಗಿದೆ? - ಹೇಗೆ ಆಗುತ್ತದೆ. ಒಬ್ಬ ಲೇಖಕ, ಬರೆಯುವ ಗ್ರಂಥಗಳೆಲ್ಲದರ ಮಟ್ಟವೂ ಒಂದೇ ಆಗಿರುವುದಿಲ್ಲ. ಅವನು ಒಂದು ಒಳ್ಳೆಯ ಗ್ರಂಥದ ಜತೆಗೆ ಎರಡು ಸಾಧಾರಣ ಗ್ರಂಥಗಳನ್ನು ಬರೆದಿರುತ್ತಾನೆ. ಆದರವನು ಬರೆದವೆಂದು ಅವುಗಳೆಲ್ಲಕ್ಕೂ ಒಂದೇ ಸ್ಥಾನವೇ? - ಮಾನವೇ? ಒಂದುಕಡೆ ಗುಂಪಿನ ಮನೋಭಾವ - ಇನ್ನೊಂದುಕಡೆ ಹಿರಿಯರ ಚಾಳಿ. ಇವುಗಳಿಂದ ಕನ್ನಡದಲ್ಲಿ ವಿಮರ್ಶೆ ಬೆಳೆದಿಲ್ಲ - ಬೆಳೆಯುವ ಹಾಗೂ ಇಲ್ಲ.

ಹಿರಿಯರ ರೀತಿನೀತಿಗಳ ವಿಷಯ ಬಂದಾಗ ಮೊನ್ನೆಯ ಒಂದು ಪ್ರಕರಣವನ್ನು ಜ್ಞಾಪಿಸಿಕೊಳ್ಳಬೇಕು. ಒಂದು ಗ್ರಂಥವನ್ನು ಓದದೆ ಹಿರಿಯರೊಬ್ಬರು ಅದರ ಮೇಲೆ ಖಂಡನಾತ್ಮಕ ವಿಮರ್ಶೆ ಬರೆದರು. ಅದು ಇನ್ನೊಂದರ ಛಾಯೆಯೆಂದರು. ಇಂಥವರನ್ನು ಲಕ್ಷ್ಯದಲ್ಲಿಟ್ಟುಕೊಂಡೆ. ಬರ್ನಾರ್ಡ್ ಷಾ ತನ್ನ 'Intelligent Woman's Guide to Socialism' ಗ್ರಂಥಕ್ಕೆ ವಿಶಾಲ ಮುನ್ನುಡಿ ಬರೆದು, ವಿಮರ್ಶಕರು ಇಷ್ಟನ್ನಾದರೂ ಓದಲಿ ಎಂದು ಸೂಚಿಸಿದುದು.

ಸತ್ಯವಾದ! ವಿಮರ್ಶೆ ಬಂದರೂ ಲೇಖಕರೂ, ಅವರ ಮಿತ್ರರೂ 'ಇದು ವ್ಯಕ್ತಿಟೀಕೆ' ಎಂದು ಆಕ್ಷೇಪಿಸುತ್ತಾರೆ. ವಿಮರ್ಶೆಯೇ ವೈಯಕ್ತಿಕವಾದುದು. ವ್ಯಕ್ತಿಯ ಮನಸ್ಸಿನ ಕ್ರಿಯೆ, ಪ್ರತಿಕ್ರಿಯೆಗಳನ್ನು ಅಳೆಯುವುದು ವಿಮರ್ಶಕನ ಕೆಲಸ. ಕವಿಯ ಮನಸ್ಸಿನ ಜಾಡನ್ನು ಹಿಡಿಯಹೋದ ವಿಮರ್ಶಕ ಅವನ ಸ್ಥಿತಿಗತಿಗಳನ್ನು ಕುರಿತು ಅವಶ್ಯಕವಾಗಿ ನಾಲ್ಕು ಮಾತು

ಹೇಳಬೇಕಾಗುತ್ತದೆ. ಅದು ಪ್ರಿಯವಾಗದಿರಬಹುದು, ಆದರೆ ಅಸತ್ಯವಾಗದು.

ಕನ್ನಡ ಸಾಹಿತ್ಯ ಏತಕ್ಕೆ ಸಾಕಷ್ಟು ಬೆಳದಿಲ್ಲ ಎಂದು ವಿವೇಚಿಸಿದರೆ ಹೊಳೆಯುವ ಸತ್ಯ 'ಶ್ರೀ ಗುಂಡಪ್ಪನವರಂತಹ ವಿಮರ್ಶಕರು ಹೆಚ್ಚು ಬಂದಿಲ್ಲ'ವೆಂದು. ಎಲ್ಲಿ ಯೋಗ್ಯ ವಿಮರ್ಶೆ ಬೆಳೆಯುವುದೋ ಅಲ್ಲಿ ಉತ್ತಮ ಸಾಹಿತ್ಯ ಬೆಳೆಯುತ್ತದೆ. ನಿದರ್ಶನ ಬೇಕೆನ್ನುವವರು ಫ್ರೆಂಚ್ ಸಾಹಿತ್ಯ ಪರಾಮರ್ಶಿಸಿ ನೋಡಲಿ.

---

## ೧೪. ನಮ್ಮೂರಿಗೆ ಬನ್ನಿ

ರೈಲ್ವೆ ಕಂಪೆನಿಯವರು ವರ್ಷದಲ್ಲಿ ಕೆಲವು ಸಲ ಅಸಾಧಾರಣ ದೈವ ಭಕ್ತಿ ತೋರಿಸುತ್ತಾರೆ. 'ರಾಮೇಶ್ವರ ತೀರ್ಥಸ್ನಾನಕ್ಕೆ ಬನ್ನಿ'—'ಪಂಡರಾಪುರ ಸಂತರ ತೌರು'—'ಕಾವೇರಿ ಸ್ನಾನ ಬೇಡವೇ' ಎಂದು ಪುಣ್ಯ ದಿನಗಳಲ್ಲಿ ಯಾತ್ರೆಯ ನೆನಸನ್ನು ಭಕ್ತರಿಗೆ ತಂದುಕೊಡುತ್ತಾರೆ. ಅವರು ಎಷ್ಟು ದೈವಭಕ್ತಿಯುಳ್ಳವರೋ ಅಷ್ಟೇ ರಸಿಕರೂ ಆಗಿದ್ದಾರೆ. 'ಅಜಂತೆಯ ಜಗತ್ಪ್ರಸಿದ್ಧ ಚಿತ್ರಕಲೆ ನೋಡದ ಕಣ್ಣು ಕಣ್ಣೇ'—'ಬಾದಾಮಿಯ ಗುಹೆಗಳು ಮಾನವ ಮಾಡಿದ ಪವಾಡ'—'ಬೇಲೂರಿನ ಶಿಲಾಬಾಲಿಕೆಯರು ನಿಮ್ಮನ್ನು ಕರೆಯುತ್ತಿದ್ದಾರೆ' ಎಂದು ಪ್ರಕಟನೆಗಳನ್ನು ಹೊರಡಿಸಿ ರಸಿಕರ ಕಣ್ಮನಗಳನ್ನು ಸೆಳೆಯುತ್ತಾರೆ. ತೀರ್ಥಯಾತ್ರೆ, ಕಲಾಕ್ಷೇತ್ರ ಯಾತ್ರೆಗಳ ವ್ಯಾಜದಲ್ಲಿ ಬರುವ ಜನರಿಂದ ತಮ್ಮ ಬೊಕ್ಕಸ ತುಂಬುವುದೆಂಬ ಉದ್ದೇಶವೇ ಅವರ ದೈವಭಕ್ತಿಗೂ ರಸಿಕತೆಗೂ ಬುನಾದಿಯೆಂಬುದನ್ನು ಎಲ್ಲರೂ ಬಲ್ಲರು.

ಮರ್ತ್ಯ ಮೆಕ್ಕಾ, ರಸಿಕರ ತೌರು, ಆದರ್ಶ ಸಂಸ್ಥಾನ ಎಂದು ಮೊದಲಾಗಿ ಹೆಸರು ಪಡೆದಿರುವ ಮೈಸೂರಿನ ಸರ್ಕಾರ, ರೈಲು ಕಂಪೆನಿ, ಹಾಗೂ ವ್ಯಾಪಾರಸ್ಥರು ಈ ಬಗೆಯ ಹಲವು ಪ್ರಕಟನೆಗಳನ್ನು ತೆಗೆದಿದ್ದಾರೆ. ನೋಟ ನೋಡ ಬರುವವನಿಗೆ ಬೇಲೂರು, ಹಳೆಯಬೀಡು, ಸೋಮನಾಥಪುರ, ಶ್ರವಣಬೆಳಗೊಳ ; ಸುಖವಸ್ತುವಾಗಿರಲು ಬಯಸಿ ಬರುವವನಿಗೆ ಕನ್ನಂಬಾಡಿ, ಜೋಗ್, ಶಿವನಸಮುದ್ರ, ಕೆಮ್ಮಣ್ಣುಗುಂಡಿ ; ಔದ್ಯೋಗಿಕ

ಪ್ರಗತಿಯನ್ನು ಪರಾಮರ್ಶಿಸಲು ಬರುವವನಿಗೆ ಭದ್ರಾವತಿ, ಹರಿಹರ, ಬೆಂಗಳೂರು ಹೀಗೇ, ಯಾವ ಯಾವ ವಸ್ತುವನ್ನು ಅಪೇಕ್ಷಿಸಿ ಬರುವವನಿಗೂ ನಿರಾಸೆಯಾಗದಷ್ಟು ಸಮೃದ್ಧಿ ಮೈಸೂರು ಸಂಸ್ಥಾನದಲ್ಲಿ.

ಕವಿ ಹೇಳಿಲ್ಲವೇ

ಚಿನ್ನದ ನಾಡದು
ಮೈಸೂರು
ಗಂಧದ ಗುಡಿಯದು
ಮೈಸೂರು
ವೀಣೆಯ ಬೆಡಗದು
ಮೈಸೂರು
ಬೆಳೆಯುವ ನಾಡದು
ಮೈಸೂರು
ಇಳೆಯ ಮಾದರಿಯದು
ಮೈಸೂರು
ಕನ್ನಡಿಗನುಸಿರದು
ಮೈಸೂರು

ಇಳೆಯ ಮಾದರಿಯೂ, ಕನ್ನಡಿಗನುಸಿರೂ ಆದ ಮೈಸೂರಿಗೆ ಹೋಗುವ ಬನ್ನಿ.

ಮೈಸೂರು ಸಂಸ್ಥಾನದ ಕರುಳು ತಿರುಳು ಬೆಂಗಳೂರು. ನಾಲ್ಕು ಲಕ್ಷ ಪ್ರಜಾಸಂಖ್ಯೆಯಿರುವ ಭವ್ಯ ನಗರ. ಸರಸ್ವತೀ ಲಕ್ಷ್ಮೀ ಪುತ್ರರ ಆವಾಸಸ್ಥಾನ. ನಾವು ಮೊದಲು ಇಳಿಯಬೇಕಾದುದು ನೋಡಬೇಕಾದುದು ಬೆಂಗಳೂರು.

ರೈಲು ಇಳಿಯುವುದಕ್ಕೆ ಮೊದಲು ಹತ್ತು ಜನ ಕೂಲಿಗಾರರು ಬಂದು ಸಾಮಾನುಗಳಿಗೆ ಕೈಹಾಕಿರುತ್ತಾರೆ. ಅವರು ಸಾಮಾನುಗಳನ್ನು ಗಾಡಿಯಿಂದ ಹೊರಗೆಳೆಯುವ ರಭಸದಲ್ಲಿ ನಮ್ಮ ಸಾಮಾನು ಯಾವದೆಂದೂ ಹೇಳಲು ಅವರ ನೆರವನ್ನೇ ಕೋರಬೇಕಾಗುತ್ತದೆ.

ಪ್ರವಾಸ ಪ್ರಯಾಸವೆಂದು ಒಂದು ಸರ್ವಧಾರಕ, (Holdall) ಒಂದು ಸೂಟ್‌ಕೇಸಿನಲ್ಲಿ ನಮ್ಮ ಗಂಟುಮೂಟೆ ಮುಗಿದಿರುತ್ತದೆ. ಜತೆಗೊಂದು ನೀರಿನ ತಂಬಿಗೆ.

"ಕೂಲಿ ಎಷ್ಟಯ್ಯಾ, "

"ಎಲ್ಲಿಗೆ ಸ್ವಾಮಿ "

"ಹೊರಗೆ ಗಾಡಿಯಲ್ಲಿಡುವುದಕ್ಕೆ "

"ಹೆಚ್ಚು ಬೇಡ ಸಾಮಿ—ಎರಡು ರೂಪಾಯಿ ಕೊಟ್ಟುಬಿಡಿ." ತಂದಿದ್ದ ಸಾಮಾನುಗಳನ್ನು ಹರಾಜು (ಏಲಂ) ಹಾಕಿದರೂ ಅಷ್ಟು ದೊರೆಯುವುದು ದುರ್ಲಭವಾಗಿರುತ್ತದೆ, ಕೂಲಿಯನ್ನೇ ಅವನು ಅಳತೆ ಮೀರಿ ಬೇಡಿರುತ್ತಾನೆ. ಅವನೊಂದಿಗೆ ಅರ್ಧಮುಕ್ಕಾಲು ಗಂಟೆ ಗುದ್ದಾಡಿದ ಮೇಲೆ ೧ ರೂಪಾಯಿಗೆ ಕುದುರುತ್ತದೆ. ಅವನು ಸಾಮಾನು ಹೊತ್ತು ಹೊರಗೆ ನಡೆದಿರುವಾಗಲೆ ಒಬ್ಬ ಜಟಕಾದವನು ಗಂಟುಬಿದ್ದಿರುತ್ತಾನೆ.

"ಎಲ್ಲೀಗೆ ಮಾರಾಜಾ "

"ಯಾವದಾದರೂ ಒಳ್ಳೇ ಹೋಟೆಲ್‌ಗೆ ನಡೆಯಯ್ಯಾ "

"ಊರೊಳಗೆ ಒಳ್ಳೇ ಒಟ್ಲು ಇದೆ ಮಾರಾಜಾ—ಎಲ್ಲಕ್ಕೂ ಹತ್ತಿರ."

"ನಡೆಯಪ್ಪಾ,—ಬಾಡಿಗೆಯೆಷ್ಟು "

"ಐದೇ ರೂಪಾಯಿ ಸಾಮಿ "

ಎದೆ ಹಾರಿತೆಂದು ಹೇಳಬೇಕಾಗಿಯೇ ಇಲ್ಲ. "ನೀನು ಬೇಡ ಹೋಗಯ್ಯಾ "

ಅವನು ಖಂಡಿತವಾಗಿ ಹೋಗುವುದಿಲ್ಲ. ಜತೆಗೇ ನಡೆದಿರುತ್ತಾನೆ. ಇನ್ನೊಬ್ಬ ಗಾಡಿಯವನೊಂದಿಗೆ ವ್ಯವಹಾರ ಆರಂಭವಾಗುತ್ತದೆ. ಶನಿ ಮಹಾರಾಯ (ಮೊದಲನೆಯ ಗಾಡಿಯವನು) ಅವನಿಗೆ ಪೂರ್ವ ಕಥೆಯ ಪರಿಚಯಮಾಡಿಕೊಡುತ್ತಾನೆ.

ಅಲ್ಲಿಗೆ ನಮ್ಮ ವ್ಯವಸ್ಥೆ ಮುಗಿಯುತ್ತದೆ. ನಾವು ಬೇಕಾದ್ದುಮಾಡಿದರೂ ಬೇರೆ ಗಾಡಿಯವರು ಹತ್ತಿರ ಸುಳಿಯುವುದಿಲ್ಲ. 'ಹಳೇ ಹೆಂಡತಿ ಪಾದವೇ ಗತಿ' ಎಂದ ಹಾಗೆ ವಿಧಿಯಿಲ್ಲದೆ ಶನಿಮಹಾರಾಯನ ಮರೆಹೊಗಬೇಕಾಗುತ್ತದೆ. ಅವನು ಗಾಡಿ ಹತ್ತಿಸಿ, ಹತ್ತು ಹೆಜ್ಜೆ ದಾಟಿ ದೀಪ

ಹತ್ತಿಸಿಕೊಳ್ಳುವುದಕ್ಕೆ ಕಾಲುಗಂಟೆ ನಿಲ್ಲಿಸಿ, ದೋಸ್ತಿಯ ಹತ್ತಿರ ಒಂದು ಬೀಡಿ ತೆಗೆದು ತೆಗೆದುಕೊಳ್ಳುವುದಕ್ಕೆ ಹತ್ತು ನಿಮಿಷ ನಿಲ್ಲಿಸಿ ತನ್ನ ರಥವನ್ನು ನಡೆಸುವುದಕ್ಕೆ ಆರಂಭಿಸುತ್ತಾನೆ. ಗಾಡಿಯಲ್ಲಿ ಕುಳಿತ ಕಾಲುಗಂಟೆ–ಅರ್ಧಗಂಟೆ ಮೇಲಕ್ಕೆ ಬನ್ನಿ-ಕೆಳಕ್ಕೆ ಹೋಗಿ ವ್ಯಾಯಾಮವಾಗಿ ಪ್ರವಾಸಿಕರಿಗೆ ಚೆನ್ನಾಗಿ ಹಸಿವು ಹುಟ್ಟುತ್ತದೆ. ಬೆಂಗಳೂರಿನ ಹವಾ ಅತ್ಯುತ್ತಮವಾದುದೆಂದು ಖ್ಯಾತಿ ಪಡೆದಿಲ್ಲವೇ ?

ಎಂಟು ಗಂಟೆಗೆ ಸ್ಟೇಷನ್ ಬಿಟ್ಟವರು ಹೋಟೆಲ್ ತಲುಪಬೇಕಾದರೆ ಹತ್ತು ಗಂಟೆ ಆಗಿರುತ್ತದೆ. ಗಾಡಿಯವನು ಊರು ಒಂದು ಸಲ ಪ್ರದಕ್ಷಿಣೆ ಮಾಡಿಸಿರುತ್ತಾನೆ. ದಾರಿಯುದ್ದಕ್ಕೂ ಅವನ ಉಪನ್ಯಾಸ, ಕುಲ್ತಿಯ ಧಾರಣೆ, ಹುಲ್ಲಿನ ಏರುಬೆಲೆ ಮೇಲೆ ವ್ಯಾಖ್ಯಾನ ನಡದೇ ಇರುತ್ತದೆ.

ಬೆಂಗಳೂರಿನ ಜಟಕಾ ಎಂದ ಕೂಡಲೆ ಅದರ ಅನುಭವ ಪಡೆಯದ ಓದುಗರು ತಮ್ಮೂರಿನ ಟಾಂಗಾಗಾಡಿಗೆ ಹೋಲಿಸಿಕೊಳ್ಳಬಹುದು. ಹಾಗಲ್ಲ. ಬೆಂಗಳೂರಿನ ಜಟಕಾಗಾಡಿಯ ಅನುಭವ ಪಡೆಯುವುದಕ್ಕೆ ಬೆಂಗಳೂರಿಗೇ ಬರಬೇಕು. ಮೈಯ್ಯ ಮೂಳೆ ಅನ್ನುವ ಪದಾರ್ಥ ಯಾವ ಯಂತ್ರ ಸಹಾಯವೂ ಇಲ್ಲದೆ ಪುಡಿಯಾಗಬೇಕಾದರೆ ಜಟಕಾ ಸಮಾನವಿಲ್ಲ. ಕುದುರೆ ಹೆಜ್ಜೆ ಹಾಕುವುದು 'ಕುಲ್ತಿ' ಬಲದಿಂದಲ್ಲ ಜಟಕಾ ಸಾಹೇಬನ ಆತ್ಮ ಶಕ್ತಿಯ ಪ್ರಭಾವದಿಂದ. ಅದು ಮಧ್ಯಮಾರ್ಗದಲ್ಲಿ ಜಾರಿಯೋ, ಕಳಚಿಯೋ, ಕುದುರೆ ಮಲಗಿಯೋ 'ಲಟಲಟ' ಎಂದು ಮುರಿದು ಬೀಳಲೇ ಬೇಕು. ಹಾಗೆ ಬೀಳದಿದ್ದರೆ ನಿಮ್ಮ ಅದೃಷ್ಟ ನೆಟ್ಟಗಿಲ್ಲವೆಂದು ಭಾವಿಸಿಕೊಳ್ಳಬಹುದು.

ಹೋಟೆಲ್ ಸೇರಿದ್ದಾಯಿತು. ಗಾಡಿಯವನು ತನ್ನ 'ಮೆಹನತ್ತಿ'ಗಾಗಿ 'ಇನಾಂ' ಬೇರೆ ಬೇಡುತ್ತಾನೆ. ಎಂಟು ಮೈಲಿ ಬಂದೆನೆಂದು ಹೇಳಿಕೊಳ್ಳುತ್ತಾನೆ. ಬೀಬಿ, ಬಚ್ಚೆಗಳನ್ನೆಲ್ಲಾ ಜ್ಞಾಪಿಸಿಕೊಂಡು 'ಗೊಳಗೊಳ' ಕಣ್ಣೀರ್ಗರೆಯುತ್ತಾನೆ. ಬಾಡಿಗೆಗೆ ಎಂಟಾಣೆ ಸೇರಿಸಿಕೊಟ್ಟು ಅವನಿಂದ ಪಾರಾಗುತ್ತೇವೆ.

ಹೋಟೆಲ್‌ನವನು ದಿವಸಕ್ಕೆ ಐದೇ ರೂಪಾಯಿ ಬೇಡುತ್ತಾನೆ. ತಾನು ಹಾಕಿಸಿರುವ ಪಲ್ಲಂಗ, ಗಾದಿಗಳನ್ನು ತೋರಿಸಿ ನಮ್ಮ ನ್ಯಾಯ ಬುದ್ಧಿಯನ್ನು ಕೆರಳಿಸುತ್ತಾನೆ. ಒಪ್ಪಿ ಕೋಣೆ ಸೇರಿದುದಾಗುತ್ತದೆ. ಊಟ ಸಿದ್ಧವಾಗಿರುತ್ತದೆ. ಎಲೆಯ ಮುಂದೆ ಕುಳಿತರೆ ಗೊಜ್ಜು, ಪಲ್ಯ, ಚಟ್ನಿ, ಬಾಯಲ್ಲಿ ನೀರೂರಿಸುತ್ತವೆ. ಅನ್ನ ಬಂತು. ತುಪ್ಪವೂ ಬಿತ್ತು. ಕಲಸಿ ಒಂದು ತುತ್ತು ಬಾಯಿಗಿಟ್ಟೆವೋ ಇಲ್ಲವೋ ಹೊಟ್ಟೆಯ ಕರುಳು ಶಾವಿಗೆಯಂತೆ ಬಾಯಿಗೆ ಬರುತ್ತದೆ. ಕಾರಣವಿಷ್ಟೆ ತುಪ್ಪವೆನ್ನುವ ಪದಾರ್ಥಕ್ಕೆ ಬೆಂಗಳೂರಿನಲ್ಲಿ 'ಡಾಲ್ಡ' ಎಂಬ ಹೆಸರೂ ಇದೆ. ಈಗ ಬೆಳೆಯುವ ಅಕ್ಕಿಯಲ್ಲಿ ವಿಟಮಿನುಗಳು ಸಾಲದೆಂದು ಸಮಪ್ರಮಾಣದಲ್ಲಿ ಕಲ್ಲು, ಭತ್ತಗಳನ್ನು ಬೆರಸಿರುತ್ತಾರೆ. ಆರೋಗ್ಯವಂತ 'ಕಲ್ಲು ತಿಂದು ಕಲ್ಲು ಜೀರ್ಣಿಸಿಕೊಳ್ಳಬೇಕಲ್ಲವೇ ?' ಹಾಗೂ ಹೀಗೂ ಸಾರಿನಲ್ಲಿ ಒಂದು ತುತ್ತು ಕಲಸಿ ಬಾಯಿಗಿಟ್ಟರೆ ಕಣ್ಣಲ್ಲಿ ಬರುವುದು ನೀರಲ್ಲ ರಕ್ತ. ಬೆಂಗಳೂರು ಹೋಟೆಲ್ ನವರಿಗೆ ಎಲ್ಲ ಆಹಾರ ಪದಾರ್ಥಗಳೂ ತುಟ್ಟಿ, ಮೆಣಸಿನಕಾಯಿ ಮಾತ್ರ ಹೊಲೆಯಗ್ಗ. ಖಾರದ ಪದಾರ್ಥಗಳ ಸ್ನೇಹ ಸಾಕೆಂದು ಮೊಸರು ಬೇಡಿದರೆ, ತೆಳ್ಳನೆಯ ಒಂದು ದ್ರಾವಕವನ್ನು ಹೊಟೇಲಿನವನು ಅನ್ನದ ಮೇಲೆ ಬಿಡುತ್ತಾನೆ.

"ಇದೇನಯ್ಯಾ ಇಷ್ಟು ನೀರಾಗಿದೆ"

"ಇದು ಮೊಸರು ಸಾರ್. ನೀರು ಬೇಕಾದರೆ ಬೇರೆ ಬಡಿಸುತ್ತೇನೆ"

ಮೊಸರೇ ಹೀಗಿದ್ದ ಮೇಲೆ ಇನ್ನು ನೀರು ಹೇಗಿರಬಹುದೆಂದು ವಿಚಾರ ಮಾಡುವಷ್ಟು ತಾಳ್ಮೆ ಬಹುಮಟ್ಟಿಗೆ ಉಳಿದಿರುವುದಿಲ್ಲ.

ಈ ಊಟ ಮುಗಿಸಿ ಹೊರಗೆ ಬಂದರೆ ಹೋಟೆಲ್ ಮಾಣಿ ಕೆಲಸಗಾರರಾದ ತಮ್ಮನ್ನು ಬಂಡವಾಳಗಾರರಾದ ಮಾಲೀಕರು ಮೋಸಗೊಳಿಸುತ್ತಿರುವ ಕತೆಯನ್ನು ಒಪ್ಪಿಸಿ ನಾಲ್ಕೆಂಟಾಣೆಗಳನ್ನು ಕಸಿಯುತ್ತಾನೆ. ಶ್ರಮಜೀವಿ—ಬಂಡವಾಳಗಾರರ ಯುದ್ಧ ಹೋಟೆಲ್‌ನಲ್ಲಿ ನಡೆದಿರುವುದು ನಿಜವೆನ್ನುವ ಮಾತು ಬೆಳಿಗ್ಗೆ ದೃಷ್ಟಾಂತಕ್ಕೆ ಬರುತ್ತದೆ. ಬಚ್ಚಲಿಗಿಳಿದು ಒಂದು ಗಂಟೆ ಕಾದರೂ ನೀರು ಬರುವುದಿಲ್ಲ, ಮಾಣಿಯೂ ನಾಪತ್ತೆ. ಯಜಮಾನ ಎಲ್ಲಿ ಎಂದರೆ 'ಅವರಿಲ್ಲ' ಅಷ್ಟೇ!!

ರೈಲು ಪ್ರಯಾಣದ ಆಯಾಸ, ಊಟ ಉಪಚಾರಗಳ ಸ್ಥಿತಿಯನ್ನೆಲ್ಲಾ ಮರೆತು ಹಾಯಾಗಿ ಮಲಗುವ ಎಂದು ಸಜ್ಜುಮಾಡಿದ್ದಾಯಿತು. ಹೋಟೆಲ್ ಮಾಲಿಕ ತನ್ನ ಪಲ್ಲಂಗ, ಗಾದಿಯ ಬಗ್ಗೆ ವಿಶೇಷ ಪ್ರಶಂಸೆ ಮಾಡಿಕೊಂಡಿದ್ದ. ಅವನ ಗಾದಿಯ ಮೇಲೆ ಸ್ವಂತ ಗಾದಿ ಹಾಕಿಕೊಂಡು ಮಲಗಿದ್ದಾಯಿತು. ಅತ್ತಿತ್ತ ಹೊರಳುವುದಕ್ಕಿಲ್ಲ—ಪಲ್ಲಂಗ ಚೌಷಷ್ಠಿರಾಗಗಳನ್ನು ಒಮ್ಮೆಲೇ ಹಾಡುವುದಕ್ಕಾರಂಭಿಸುತ್ತಿತ್ತು. ಒಂದೇ ಸಮನೆ ಸೊಳ್ಳೆಗಳು ಮುತ್ತಿ ಕಾಡಲಾರಂಭಿಸಿದವು. ಜತೆಗೆ ತಿಗಣೆ ನನ್ನ ಮೈಯೋ ತಮ್ಮದೆಂದು ಭಾವಿಸಿಕೊಂಡವು.

ಗಾದಿ, ಪಲ್ಲಂಗದ ಸುಖಸಾಕೆಂದು ನೆಲದ ಮೇಲೆ ಹಾಸಿಕೊಂಡು ಮಲಗಿದ್ದಾಯಿತು.

ಹಾಗೂ ಹೀಗೂ ಬೆಳಗಾಯಿತು. ಊರು ನೋಡಿ ಬರುವ ಎಂದು ಹೊರಟೆವು. ಬೆಂಗಳೂರಿನಂತಹ ದೊಡ್ಡ ಪಟ್ಟಣಕ್ಕೆ ಬಂದಿದ್ದೇವೆ, ಏನಾದರೂ ಒಳ್ಳೆಯ ಪದಾರ್ಥ ಕೈಗೆ ಸಿಕ್ಕಿದರೆ ಕೊಳ್ಳುವ ಎಂದು ಹೊರಟೆವು. ಪೇಟೆಗಳು ಸುತ್ತಿದ್ದಾಯಿತು. ಎಲ್ಲಿ ನೋಡಿದರೂ ಗುಜರಾತಿ, ಮಾರವಾಡಿ, ಮುಲ್ತಾನಿ, ಸಿಂಧಿ ವರ್ತಕರು. ಕನ್ನಡದ ಬೋರ್ಡ್ ಬೇಕೆಂದರೂ ಸಿಕ್ಕುವಂತಿರಲಿಲ್ಲ. ಎಲ್ಲರ ಬಾಯಲ್ಲಿಯೂ ಅರ್ಧ ಇಂಗ್ಲಿಷ್ ಬೆರೆತ ವಿಚಿತ್ರ ಕನ್ನಡ.

ಸ್ವಲ್ಪ ಬಟ್ಟೆ ಕೊಳ್ಳೋಣವೆಂದು ಒಂದು ಅಂಗಡಿ ಹೊಕ್ಕೆವು. ಎಷ್ಟು ಹೊತ್ತು ನಿಂತರೂ ಮಾತನಾಡಿಸುವವರು ದಿಕ್ಕಿಲ್ಲ. ನಾನೇ ಬಲವಂತದಿಂದ ಮಾತನಾಡಿಸಿ,

"ಒಳ್ಳೆಯ ಷರ್ಟಿಂಗ್ ಇದೆಯೇ?"

"ಕೂಪನ್ ಇದೆಯೇ?" ಎಂದ ಅಂಗಡಿಯವ.

"ಇಲ್ಲ. ನಾವು ಪರಸ್ಥಳದವರು."

"ಅಲ್ಲಿಗೇ ಹೋಗಿ ಬಟ್ಟೆಗೆ" ಎಂದ.

ಬಟ್ಟೆ ದೊರೆಯಲಿಲ್ಲ ಎಂದು ದುಃಖವೆನಿಸಲಿಲ್ಲ. 'ಇಲ್ಲ' ಎನ್ನುವ ಮಾತನ್ನು ಸ್ವಲ್ಪ ನಯವಾಗಿ ಹೇಳಬಾರದೇ ಎಂದು ವ್ಯಸನವಾಯಿತು.

ಇಳುಮೋರೆ ಹಾಕಿಕೊಂಡು ರಸ್ತೆಯಲ್ಲಿ ಬರುತ್ತಿದ್ದೆವು. ಬೆಂಗಳೂರಿನ ಕನಸು ಸ್ವಲ್ಪಸ್ವಲ್ಪವಾಗಿ ಜಾರುತ್ತಿತ್ತು. ಒಬ್ಬ ಪೋಲಿಸಿನವ, ಒಬ್ಬ ಚಟ್ಟೀಗಾರ ಬೆನ್ನು ಹತ್ತಿದರು. ಚಟ್ಟೀಗಾರ ಸಬ್‌ಇನ್‌ಸ್ಪೆಕ್ಟರ್ ಎಂದು ಕಾಣುತ್ತದೆ. ಮಾತೆತ್ತಿದ್ದರೆ ಅವನ ಬಾಯಲ್ಲಿ 'ಬ್ಲಡಿ' (Bloody) ಬರುತ್ತಿತ್ತು.

"ಹೀಗೆ ಏಕೆ ಬರುತ್ತಿರುವಿರಿ."

ಎಂದು ಕೇಳಿದ. ಅವನು ಉಪಯೋಗಿಸಿದ ಭಾಷೆ ಇದಲ್ಲ. ಆದರೆ ಆ ಭಾಷೆ ಬರೆಯಲು ಸಾಧ್ಯವಿಲ್ಲವೆಂದು ನನ್ನ ಭಾಷೆಯನ್ನೇ ಉಪಯೋಗಿಸಿದ್ದೇನೆ.

"ರಸ್ತೆ—ಅದಕ್ಕೋಸುಗ ಬರುತ್ತಿರುವೆವು."

"ನಡೀರಿ—ಪೋಲೀಸ್ ಸ್ಟೇಷನ್ನಿಗೆ."

"ಏಕೆ ? ನಾವು ಮಾಡಿದ ಅಪರಾಧವೇನು ?"

"ಫುಟ್-ಪಾತ್ ಮೇಲೆ ಹೋಗಬೇಕೆಂದು ಗೊತ್ತಿಲ್ಲವೇ ?"

"ಗೊತ್ತಿಲ್ಲ—ಇನ್ನುಮೇಲೆ ಹಾಗೇ ಮಾಡುತ್ತೇವೆ. ನಾವು ಪರಸ್ಥಳ"

"ಸಾಧ್ಯವಿಲ್ಲ—ನಡೆಯಿರಿ ಪೋಲೀಸ್ ಸ್ಟೇಷನ್ನಿಗೆ"

ಅವನೊಂದಿಗೆ ಚರ್ಚೆ ಸುಖವಿಲ್ಲವೆಂದು ಕೈಗೆ ಎರಡು ಬೆಳ್ಳಿ ತಗಡು ಅಂಟಿಸಿ ಪುಟ್ಟ—ಪಥದ (foot-path) ಮೇಲಕ್ಕೆ ಬಂದೆವು. ಅದು ಹೆಸರಿಗೆ ಪಥ. ಕಲ್ಲು ಗುಡ್ಡೆಗಳು — ಸುಲಿದ ಕಿತ್ತಲೆ ಬಾಳೆಯ ಹಣ್ಣಿನ ಸಿಪ್ಪೆಗಳು — ಸಾಲಿಗೆ ಬಂಗಾಳದ ದುರಂತವನ್ನು ವಿಾರಿಸುವಂತೆ ಕಂಗೆಟ್ಟಿದ್ದ ಭಿಕ್ಷುಕರು — ವ್ಯಾಧಿಗ್ರಸ್ತ ಭಿಕ್ಷುಕರು. ಈ ದಿವ್ಯಮಾರ್ಗದಲ್ಲಿ ಹೋಗದಿದ್ದವನು ಮಹಾಪರಾಧಿ.

ಬೆಂಗಳೂರಿನ ಅನುಭವ ಸಾಕುಸಾಕಾಗಿ ಹೋಗಿತ್ತು. ಬೇಸರ ನೀಗಿಕೊಳ್ಳುವುದಕ್ಕೆ ಯಾವದಾದರೂ ಸಿನೀಮಾಕ್ಕೆ ಹೋಗೋಣವೆಂದು, ದಾರಿಯಲ್ಲಿ ಸಿಕ್ಕಿದ ಒಂದು ಹೋಟೇಲಿನಲ್ಲಿ ಸ್ವಲ್ಪ ತಿಂಡಿ ತಿಂದು ಹೊರಟೆವು. ಮಂದಿರದ ಹೊರಗೆ ಭವ್ಯ—ಒಳಗೆ ಗುಹೆ. ಅದರ ಯಜಮಾನನೂ ಒಬ್ಬ ಗುಜರಾತಿ. ಟಿಕೆಟಿನ ಧಾರಣೆ ಮೊದಲಿಗೆ ನಾಲ್ಕು ಪಟ್ಟು ಹೆಚ್ಚು. ೧-೨-೦ ಟಿಕೆಟ್ ಕೊಂಡು ಕುಳಿತದ್ದಾಯಿತು. ಎಳ್ಳುಹಾಕಿದರೆ ಸಿಡಿಯದಂತಹ

ಜನಸಂದಣಿ. ಒಳಗೆ ಫ್ಯಾನಿನ ಸುಳುಹೂ ಕಾಣದು. ಅಸಹನೀಯವಾದ ಶಖೆ. ರಜತಪರದೆ ಕಾಣದಷ್ಟು ಸಿಗರೇಟ್ ಬೀಡಿಗಳ ಹೊಗೆಯ ತೆರೆ. ಚಿತ್ರದ ಹಾಡು, ಮಾತು ಮುಳುಗುವಷ್ಟು ಜನರ ಮಾತಿನಶಬ್ದ. ಇವುಗಳಿಗೆ ಕಳಶವಿಟ್ಟಂತೆ ಕಡಲೆಕಾಯಿ (ಶೇಂಗಾಯಿ) ಒಡೆದು ತಿನ್ನುವ 'ಪಟಪಟ' ಶಬ್ದ. ಸ್ವಲ್ಪ ಹೊತ್ತು ಕುಳಿತದ್ದು ಸಾಕಾಗಿ ಅಲ್ಲಿಂದ ಹೊರಬಿದ್ದೆವು.

ಈಯೆಲ್ಲ ಅನುಭವಗಳನ್ನು ಮರೆತು ಊರಿಗೆ ಒಂದಾದರೂ ಸದಭಿಪ್ರಾಯವನ್ನು ಹೊತ್ತುಹೋಗುವ ಎಂದು 'ಕನ್ನಡಿಗನುಸಿರಾದ' ಕನ್ನಡ ಸಾಹಿತ್ಯ ಪರಿಷತ್ತನ್ನು ಕಂಡು, ಅಲ್ಲಿನ ಸಾಹಿತ್ಯದೇವತೆಗಳ ದರ್ಶನ ತೆಗೆದುಕೊಂಡು ಹೋಗುವ ಎಂದು ಚಾಮರಾಜಪೇಟೆ ವಿಚಾರಿಸಿಕೊಂಡು ಬಂದೆವು.

ಕುಬ್ಜಮೂರ್ತಿ ಹಾಗಿರುವ ಒಂದು ವಿಚಿತ್ರ ಕಟ್ಟಡ. ಒಳಹೊಕ್ಕೆವು. ಎದುರಿಗೆ ಸೂಟ್ ಧರಿಸಿದ ಮಹನೀಯರೊಬ್ಬರು ಬಂದರು.

" ಇದೇಯೇನು ಸಾರ್. ಕನ್ನಡ ಸಾಹಿತ್ಯ ಪರಿಷತ್ತು."

" ಬೋರ್ಡು ಕಾಣಲಿಲ್ಲವೇ ?" ಎಂದರು.

ಒಳಕ್ಕೆ ಹೋಗುವುದಕ್ಕೆ ಯತ್ನಿಸಿದೆವು.

" ಏನು ಏನು ! ಏನು ಕೆಲಸ ? ನೀವು ಯಾರು ?"

ಎಂದರು ಮಹನೀಯರು.

" ನಮ್ಮದು............ಊರು. ಸಾಹಿತ್ಯ ಪರಿಷತ್ತು ನೋಡಿ ಹೋಗಲು ಬಂದಿದ್ದೇವೆ."

" ಹಾಗೋ ? —ವೆಂಕಟಾ, ವೆಂಕಟಾ " ಎಂದು ಕೂಗಿದರು.

" ಉಪಾಧ್ಯಕ್ಷರನ್ನು ಕಾಣಬಹುದೇ ?"

" ಅವರು ಅಪರೂಪವಾಗಿ ಇಲ್ಲಿ ಬರುತ್ತಾರೆ. "

" ಹಾಗಾದರೆ ನಿತ್ಯದ ಕಾಗದ ಪತ್ರಗಳು..........."

" ಫೈಲ್ ಮನೆಗೆ ಕಳಿಸಿಕೊಡುತ್ತೇನೆ. "

" ಕಾರ್ಯದರ್ಶಿಗಳು........ "

" ಅವರು ಬರುತ್ತಾರೆ .... ಇಂತಹ ಹೊತ್ತು ಎಂದು ಗೊತ್ತಿಲ್ಲ. "

" ಸಂಪಾದಕರು ಯಾರಾದರೂ ಇದ್ದಾರೆಯೇ ?"

" ಇಲ್ರೀ ಅಂದರೆ " ಎಂದು ಮುಖ ಗಂಟಿಕ್ಕಿದರು.

ಅಷ್ಟರಲ್ಲಿ ವೆಂಕಟಾ ಬಂದಿದ್ದ.

" ಇವರಿಗೆ ಪರಿಷತ್ತೆಲ್ಲಾ ತೋರಿಸು "

ಎಂದು ವಿಧಿಸಿ ಒಳಕ್ಕೆ ಹೊರಟು ಹೋದರು. ಪರಿಷತ್ತು ನೋಡಿದ್ದಾಯ್ತೆಂದು ನಾವು ಅಲ್ಲಿ ನಿಲ್ಲದೆ ಹಿಂದಿರುಗಿದೆವು. ಕನ್ನಡ ತಾಯಿ ಮಂದಿರದ ಪೂಜಾರಿಗಳ ವರ್ತನೆ ನೋಡಿ ಮನಸ್ಸು ಬಹಳ ನೊಂದಿತು.

ಬೆಂಗಳೂರು ಸಾಕೆನಿಸಿತು. ಹೆಚ್ಚುಕಾಲ ಅಲ್ಲಿ ನಿಲ್ಲುವುದು ವಿವೇಕ ವಲ್ಲ ಎಂದು ಹೊಳೆಯಿತು. ಹೋಟೇಲಿಗೆ ಬಂದು, ನಮ್ಮ ಗಂಟು ಮೂಟೆ ಕಟ್ಟಿ ಸ್ಟೇಷನ್ನಿಗೆ ಧಾವಿಸಿದೆವು—ಊರಿಗೆ ಹಿಂದಿರುಗುವುದಕ್ಕೆ !

ಸ್ಟೇಷನ್ನಿನಲ್ಲಿ ನಮ್ಮ ಕಣ್ಣು ಇರಿಯುತ್ತ ನಿಂತಿತ್ತು ಒಂದು ಬೋರ್ಡು " ಬನ್ನಿ ಮಾದರಿ ಮೈಸೂರಿಗೆ." ನಾವೂ ದನಿಗೂಡಿಸಿದೆವು :

ಬನ್ನಿ — ಮಾದರಿ ಮೈಸೂರಿಗೆ
ಬನ್ನಿ — ಗಂಧದ ಗುಡಿಗೆ
ಬನ್ನಿ — ಕನ್ನಡದ ನೆಲವೀಡಿಗೆ.

ಬನ್ನಿ — ಬನ್ನಿ — ಬನ್ನಿ

———

## ೧೫. ಸುಳ್ಳು

'ಸುಳ್ಳಾಡದಿರು'—'ಸುಳ್ಳು ಪಾಪಸಾಧನ' ಎಂಬ ಉಪದೇಶ ಪ್ರಾಥಮಿಕಶಾಲೆಯಲ್ಲಿಯೇ ನಮಗೆ ಆರಂಭವಾಗಿರುತ್ತದೆ. ಜಗತ್ತಿನ ಪ್ರವಾದಿಗಳೆಲ್ಲರೂ 'ಸುಳ್ಳು ಹೇಳಬೇಡ' ಎಂಬ ಪರಮಾಜ್ಞೆ ವಿಧಿಸದೆ ಬಿಟ್ಟಿಲ್ಲ, ಸುಳ್ಳು ಹೇಳುವುದು ಹೀನತನದ ಲಕ್ಷಣವೆಂಬ ನಂಬಿಕೆ ಆದಿಯಿಂದ ಬೆಳೆದು ಬಂದಿದೆ. ಇದ್ದುದನ್ನು ಮರೆಮಾಚಿ, ಅದರ ಬದಲು ಇಲ್ಲದುದನ್ನು ಹೇಳುವುದಕ್ಕೆ ಸುಳ್ಳು ಎಂಬ ಹೆಸರು ಕೊಟ್ಟರು ಹಿಂದಿನವರು. ಸುಳ್ಳರ ಬಗ್ಗೆ ಬಹಳ ತೀಕ್ಷ್ಣವಾದ ಮಾತುಗಳನ್ನು ಸರ್ವಜ್ಞ ಆಡಿದ್ದಾನೆ.

ಹುಸಿವನಿಂದಯ್ನೂರು ಪಶುವ ಕೊಂದವ ಲೇಸು
ಶಿಶುವಧೆಯ ಮಾಡಿದರೆ ಲೇಸು ಮರೆಯಲಿ-
ದ್ದೆಸೆದರೂ ಲೇಸು ಸರ್ವಜ್ಞ ||

ಹಾಲುಳ್ಳ ಹಸುಲೇಸು ಶೀಲುಳ್ಳ ಶಿಶುಲೇಸು
ಬಾಲೆ ಸಜ್ಜನೆಯು ಬಲುಲೇಸು ಹುಸಿಯದ
ನಾಲಗೆಯೆ ಲೇಸು ಸರ್ವಜ್ಞ ||

ಆಡಿ ಹುಸಿಯಲು ಹೊಲ್ಲ ಕೂಡಿ ತಪ್ಪಲು ಹೊಲ್ಲ
ಕಾಡುವನೆಂಟ ಬರಹೊಲ್ಲ ಸಟೆಯುತಾ-
ನಾಡುವನೆ ಹೊಲ್ಲ ಸರ್ವಜ್ಞ ||

ಕಾಲುಮುರಿದರೆ ಹೊಲ್ಲ ಬಾಲೆ ಮುದುಕಗೆ ಹೊಲ್ಲ
ನಾಲಿಗೆಯೆರಡು ನುಡಿಯಲು ಹೊಲ್ಲ, ಸಮರದಿ
ಸೋಲುವದೆ ಹೊಲ್ಲ ಸರ್ವಜ್ಞ ||

ದಿಟವೆ ಪುಣ್ಯದ ಪುಂಜ ಸಟೆಯೆ ಪಾಪದ ಬೀಜ
ಕುಟಿಲ ವಂಚನೆಗೆ ಹೋಗದೆ ನಿಜದಿ ಪಿಡಿ
ಘಟವನೆಚ್ಚರದಿ ಸರ್ವಜ್ಞ ||

ಹುಸಿಯ ಪೇಳ್ವದರಿಂದ ಹಸಿದು ಸಾವುದು ಲೇಸು
ಹುಸಿದು ಮೆರೆಯುವನ ಬದುಕಿಂದ ಹಂದಿಯ
ಇಸಿಯು ಲೇಸೆಂದ ಸರ್ವಜ್ಞ ||

ಹುಸಿವಾತ ದೇಗುಲದ ದೆಸೆಯತ್ತ ಮುಂತಾಗಿ
ನೊಸಲೆತ್ತಿ ಕರವ ಮುಗಿದರೆ ಇಷ್ಟುದ್ದ
ಹುಸಿವನೆಂದರಿಗು ಸರ್ವಜ್ಞ ||

ಒಳ್ಳಿಯನು ಇರದೂರು ಕಳ್ಳನೊಡನಾಟವೂ
ಸುಳ್ಳನ ಮಾತು ಇವು ಮೂರು ಕೆಸರೊಳಗೆ
ಮುಳ್ಳುತುಳಿದಂತೆ ಸರ್ವಜ್ಞ ||

ಕಳ್ಳತನ ಕಪಟವು ಸುಳ್ಳಿನಾಮೂಲವು
ಕಳ್ಳ, ಕೈಗಳ್ಳ, ಮೈಗಳ್ಳನೊಮ್ಮೆ ತಾ
ಹಳ್ಳ ಕಾಣುವನು ಸರ್ವಜ್ಞ ||

ಭಕ್ತಿಭಂಡಾರಿ ಬಸವಣ್ಣನವರೂ ಈ ಬಗ್ಗೆ ಬಹಳ ಖಂಡಿತವಾದ ಮಾತುಗಳನ್ನೇ ಹೇಳಿದ್ದಾರೆ.

" ದೇವಲೋಕ, ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೋ
ಸತ್ಯವ ನುಡಿವುದೇ ದೇವಲೋಕ, ಮಿಥ್ಯವ ನುಡಿವುದೇ ಮರ್ತ್ಯ [ಲೋಕ,
ಆಚಾರವೇ ಸ್ವರ್ಗ, ಅನಾಚಾರವೇ ನರಕ,
ಕೂಡಲ ಸಂಗಮದೇವ ನೀವೇ ಪ್ರಮಾಣು."

"ಸ್ವಾಮಿಭೃತ್ಯ ಸಂಬಂಧಕ್ಕೆ ಆವುದು ಪಥವೆಂದರೆ
ದಿಟವ ನುಡಿವುದು, ನುಡಿದಂತೆ ನಡೆವುದು
ನುಡಿದು ಹುಸಿಯು, ನಡೆದು ತಪ್ಪುವ ಪ್ರಪಂಚಿಯನೊಲ್ಲ
ಕೂಡಲ ಸಂಗಮದೇವ."

ಸುಳ್ಳು ಹೇಳಿದರೆ ಆಗುವ ಅನರ್ಥವನ್ನು ನಮ್ಮ ಮನಸ್ಸಿನ ಮೇಲೆ ಬಿಂಬಿಸುವುದಕ್ಕೆ ಪುರಾಣಗಳಲ್ಲಿ ಹಲವು ಕತೆಗಳಿವೆ. ದ್ರೋಣರಿಗೆ ಒಂದು ಸುಳ್ಳು ಹೇಳಿದ ಕಾರಣಕ್ಕಾಗಿ ಪರಮ ಧರ್ಮಿಷ್ಠನಾದ ಯುಧಿಷ್ಠಿರ ನರಕ ದರ್ಶನಮಾಡಬೇಕಾಗಿ ಬಂತು.

ಜ್ಞಾನಿಗಳು ಹೇಳುವುದು ಮಾತ್ರವೇ ಅಲ್ಲ. ಜನಪದದಲ್ಲಿಯೂ ಇದೇ ಭಾವನೆ ಬೇರೂರಿದೆ. ಜನಪದ ಸಾಹಿತ್ಯದಲ್ಲಿ ಹಲವು ಉಲ್ಲೇಖ ಗಳಿವೆ. ಗಾದೆ ಮಾತುಗಳಂತೂ ಈ ವಿಷಯದಲ್ಲಿ ಹೇರಳವಾಗಿ ದೊರೆಯು ತ್ತವೆ. 'ಒಳ್ಳೇ ಮಾತಿಗೆ ಸುಳ್ಳೇ ಪ್ರಧಾನ'—'ಸುಳ್ಳು ಬೆದರಿಕೆ ಹಾಕು ವುದರಿಂದ ಬಹಳ ಹಾನಿ'—'ಸುಳ್ಳನ ಮಾತು ಕೆಸರೊಳಗೆ ಮುಳ್ಳು ತುಳಿ ದಂತೆ'—'ಸುಳ್ಳನ ಮನೇಲಿ ಉಂಡಲ್ಲದೆ ಬದ್ಧವಲ್ಲ'—'ಪೋಕನ ಮಾತು ಕಾಕು, ಸುಳ್ಳನ ಮಾತು ಟೊಳ್ಳು'—'ಸರಸ ಇದ್ದವನ ಮನೆಗೆ ಬರಿಸುಳ್ಳ ಹೋದರೆ ಹೊರಸಿಕೊಟ್ಟನಂತೆ ಒಂದು ಮೊರ ಸುಳ್ಳ'—'ಸುಳ್ಳು ದೇವರಿಗೆ ಕಳ್ಳ ಪೂಜಾರಿ'—'ಜೊಳ್ಳು ಮನುಜರು ತಾವು ಸುಳ್ಳು ಸಂಸಾರದೊಳು ಮಳ್ಳಿಡಿದು, ಮಾಯೆಯೆಂಬವಳ ಬಲೆಯೊಳು ಹೊಳ್ಳಾಡುತಿಹರು'— 'ನಾಳೆ ನಾಳೆ ಎಂದು ಸುಳ್ಳು ಹೇಳಿ ಹೋಳಿಗೆ ತಪ್ಪಿಸಿದಿ.'

ನಮ್ಮ ಧಾರ್ಮಿಕ ಸಾಮಾಜಿಕ ಜೀವನದಲ್ಲಿ ಸತ್ಯ ಮೂಡಿದ್ದಾಗ, ನಮ್ಮ ಸಂಸ್ಕೃತಿ ಜೀವಂತವಾಗಿದ್ದಾಗ ಸುಳ್ಳೆಂದರೆ ಜನ ಅಂಜುತ್ತಿದ್ದರು. ನಾಗರಿಕತೆ ಬೆಳೆದಂತೆ, ಕೋರ್ಟು ಕಛೇರಿಗಳು ವೃದ್ಧಿಯಾದಂತೆ, ವಕೀ ಲರ ಸಂತಾನ ಅಮಿತವಾದಂತೆ ಸುಳ್ಳಿಗೆ ಮಾನ್ಯತೆ ಬರಲಾರಂಭವಾಯಿತು. ಹಿಂದೆ ಲಕ್ಷಾಂತರ ರೂಪಾಯಿ ವ್ಯವಹಾರ ಬಾಯಿ ಮಾತಿನಲ್ಲಿ ನಡೆದು ಹೋಗುತ್ತಿತ್ತು. ಇಂದು ಬ್ಯಾಂಕಿನಲ್ಲಿ ಹಣವಿಲ್ಲದೆ ಸುಳ್ಳು ಚೆಕ್ಕು ಕೊಡು ವುದು ಸರ್ವಸಾಮಾನ್ಯ. ಶೂಲಕ್ಕೇರಿಸುತ್ತಿದ್ದರೂ ಜನ ಕೋರ್ಟಿಗೆ (ಹಿಂದೆ ಚಾವಡಿಗೆ) ಬಂದು ಸುಳ್ಳು ಸಾಕ್ಷ್ಯ ಹೇಳುತ್ತಿರಲಿಲ್ಲ; ಈಗ ನಿಜವಾದ

ಸಾಕ್ಷ್ಯ ಹೇಳುವ ಪ್ರಾಣಿಯನ್ನು ಮ್ಯೂಸಿಯಂನಲ್ಲಿ ಹುಡುಕಿದರೂ ಸಿಕ್ಕ ಲಿಕ್ಕಿಲ್ಲ.

ಕ್ರಿಯಾತ್ಮಕ ಕಲೆಯೆಲ್ಲಾ ಸುಳ್ಳಿನ ಪ್ರಪಂಚಕ್ಕೇ ಸೇರಿದುದೆಂಬ ಪ್ರಸ್ತಾನವನ್ನಿಟ್ಟುಕೊಂಡು ಪ್ರಸಿದ್ಧ ಸಾಹಿತಿ ಆಸ್ಕರ್ ವೈಲ್ಡ್ 'The Decay of lying' (ಸುಳ್ಳಿನ ಸಾವು) ಎಂಬ ಪ್ರಬಂಧ ಬರೆದು, ಸುಳ್ಳಿನ ಪೀಳಿಗೆ ಅಳಿಯುತ್ತಿದೆಯಲ್ಲಾ ಎಂದು ಹಲುಬಿದ್ದಾನೆ. ಇಂದು ಅಂತಹ ಹಲುಬಿಗೆ ಎಡೆಯಿಲ್ಲ. ಎರಡು ಬಿಲ್ಲೆಯ ಒಂದು ವರ್ತಮಾನ ಪತ್ರಿಕೆ ತೆಗೆದರೆ ಸಾಕು, ಸುಳ್ಳಿನ ಸುರಿಮಳೆ. ಜಾಹೀರಾತಿನಿಂದ ಮೊದಲುಗೊಂಡು, ಪ್ರಧಾನ ಲೇಖನದವರೆಗೂ ಅಪದ್ಧದ ಕಂತೆ. ಹತ್ತೇ ದಿವಸದಲ್ಲಿ ೬೦ ವರ್ಷದ ಮುದುಕರನ್ನು ೧೮ ವರ್ಷದ ಹುಡುಗರನ್ನಾಗಿ ಮಾಡುವ ಜಾಹೀರಾತುಗಳು, ದುರ್ಗಾಖೋಟೆ, ಸ್ವರ್ಣಲತಾ, ಕಣ್ಣಾಂಬಾ, ಶಾಂತಾ ಆಪ್ಟೆಯರನ್ನು ಸುಂದರಿಯರೆಂದು ಕರೆಯುವ ಪ್ರಕಟನೆಗಳು ಅದರ ತುಂಬ ಇರುತ್ತವೆ.

ಸುಳ್ಳನ್ನು ಒಂದು ಕಲೆಯನ್ನಾಗಿ ಮಾರ್ಪಡಿಸಿ ಅದನ್ನು ಶಾಸ್ತ್ರೋಕ್ತವಾಗಿ ಬಳಸಿಕೊಂಡವರು ವರ್ತಮಾನ ಪತ್ರಿಕಾಕರ್ತರು ಮತ್ತು ರಾಜಕಾರಣ ಧುರೀಣರು. ಕಾಂಗ್ರೆಸ್ಸಿನಲ್ಲಿರುವವರೆಲ್ಲ ನಾಯಕರೇ ಅವರ ಪ್ರತಿಯೊಂದು ಮಾತೂ ಅದ್ಭುತ ಭಾಷಣವೇ, ಅವರು ಮಾಡಿದ ಪ್ರತಿಯೊಂದು ಕೆಲಸವೂ ಘನಕಾರ್ಯವೇ !

ವೃತ್ತ ಪತ್ರಿಕೆಗಳಲ್ಲಿ ಈ ಕಲೆಯನ್ನು ಬೆಳಸಿರುವ ಬಗೆಗೆ ಒಂದೆರಡು ದೃಷ್ಟಾಂತ ಸಾಕು. ಫ್ಲೀಟ್ ಸ್ಟ್ರೀಟಿನಲ್ಲಿದ್ದ ಒಂದು ಪತ್ರಿಕಾ ಕಛೇರಿಯಲ್ಲಿ ಸಂಪಾದಕ ತನ್ನ ರಿಪೋರ್ಟರನ್ನು ಕರೆಸಿ ಹೇಳಿದನಂತೆ

"ಏನಯ್ಯಾ, ನಿನ್ನ ಸುದ್ದಿಗಳೆಲ್ಲಾ ಜೊಳ್ಳಾಗುತ್ತಿವೆ. ಸ್ವಾರಸ್ಯವಾಗಿ ಏನಾದರೂ ಬರೆಯಯ್ಯ ಕೆಲಸ ಉಳಿಸಿಕೊಳ್ಳುವ ಆಸೆಯಿದ್ದರೆ."

"ಏನು ಮಾಡಲಿ–ನಾನು ಹೋಗುವ ಕಡೆ ಯಾವ ಸ್ವಾರಸ್ಯವಾದ ಘಟನೆಯೂ ಸಂಭವಿಸುವದಿಲ್ಲವಲ್ಲ. ಕೊನೆಗೊಂದು ಖೂನಿಯೂ ಆಗಿಲ್ಲ."

"ಖೂನಿಯಾಗದಿದ್ದರೆ ಮಾಡಿ ಬರೆ."

ಮುಂಬಯಿಯಲ್ಲಿ ಜರುಗುವ ಅಖಿಲಭಾರತ ಕಾಂಗ್ರೆಸ್ ನಾಯಕರ ಅಧಿವೇಶನವನ್ನು ಬೆಂಗಳೂರಿನಲ್ಲಿಯೇ ಕುಳಿತು ನಮ್ಮ ಪತ್ರಿಕಾಪ್ರತಿನಿಧಿಗಳು ಕೊಡಬಲ್ಲರು. ಕಣ್ಣೆದುರಿಗೆ ನಡೆದಂತೆ ವರ್ಣಿಸಬಲ್ಲರು. ಒಂದುಸಲ ಇಂತಹ ವರ್ಣನೆ ಯಾವದೋ ಊರಿನ ಯಾವದೋ ಉತ್ಸವದ ಬಗ್ಗೆ ಬಂತು. ಗ್ರಹಚಾರವಶಾತ್ ಆ ಉತ್ಸವ ನಿಂತು ಹೋಗಿತ್ತು. ಉತ್ಸವ ನಿಂತರೇನು ಪತ್ರಿಕೆಯಲ್ಲಿ ವರದಿ ಕೂಲಂಕಷವಾಗಿ ಬಂದೇ ಬಿಟ್ಟಿತು.

ಸುಳ್ಳುವ ಹೇಳುವ ಗುಣ ಜನಾಂಗದ ರಕ್ತಗತವಾಗುತ್ತಿದೆ. ಅದಕ್ಕೆ ಆಂಗ್ಲರು 'ಬಿಳಿಯ ಸುಳ್ಳು—ಕರಿಯ ಸುಳ್ಳು' ಎಂದು ವಿಭಾಗಿಸುವುದು. ಡಂಭಾಚಾರಕ್ಕೆ, ಸೌಜನ್ಯಕ್ಕೆ, ಪರಹಿತಕ್ಕೆ ಸುಳ್ಳು ಹೇಳಿದರೆ ಅದು ಬಿಳಿಯ ಸುಳ್ಳಂತೆ—ಸ್ವಾರ್ಥಕ್ಕೆ, ಪರಪೀಡನಕ್ಕೆ, ದುರಾಗ್ರಹಕ್ಕೆ ಸುಳ್ಳು ಹೇಳಿದರೆ ಅದು ಕರಿಯ ಸುಳ್ಳಂತೆ. ಒಂದು ಮದುವೆ ಮಾಡಿಸುವುದಕ್ಕೆ ಸಾವಿರ ಸುಳ್ಳು ಹೇಳಬೇಕಂತೆ. ಇಂತಹ ಸುಳ್ಳು 'ಬಿಳಿಯ ಸುಳ್ಳಿನ' ವರ್ಗಕ್ಕೆ ಸೇರಿರಬೇಕು.

ಸುಳ್ಳು ಹೇಳದಿರಲು ಸಾಧ್ಯವಾಗದೆ ಇದ್ದವರಿಗೆ ಒಂದು ಹಿತೋಕ್ತಿ–ದಯೆಯಿಟ್ಟು 'ಬಿಳೀ ಸುಳ್ಳನ್ನಾದರೂ ಅಭ್ಯಾಸ ಮಾಡಿ.'

———

## ೧೬. ಜಿಪುಣತನ

'ಯೋಗಃ ಕರ್ಮಸು ಕೌಶಲಂ' ಎಂದು ಹೇಳಿದ ಭಗವಾನ್ ಶ್ರೀಕೃಷ್ಣ ಜೀನರನ್ನು ಗುರಿಯಲ್ಲಿಟ್ಟುಕೊಂಡಿದ್ದನೊ ಇಲ್ಲವೊ ತಿಳಿಯದು. ಯಾವ ಕರ್ಮದಲ್ಲಿಯಾದರೂ ಪೂರ್ಣ ನಿಷ್ಣಾತತೆ ಪಡೆದರೆ ಯೋಗ ಎಂದು ಭಗವಂತ ಹೇಳಿದ ಮಾತನ್ನು ಒಪ್ಪಿಕೊಳ್ಳುವುದಾದರೆ ಜೀನತನದಲ್ಲಿ ಪರಿಪೂರ್ಣತೆಯನ್ನು ಪಡೆದವನೂ ಯೋಗಿಯೇ. ದಾನ ಧರ್ಮ ಮಾಡುವ ಅಭ್ಯಾಸವಿಟ್ಟುಕೊಳ್ಳದೆ, ತಾನು-ತಾನು ಎಂದು ಚಿಂತಿಸುವುದು ಲೋಭಿಯ ಲಕ್ಷಣ. ಪರರಿಗೆ ಸ್ವಲ್ಪವೂ ಕೊಡದೆ ಎಲ್ಲವನ್ನೂ ತನಗಾಗಿಯೇ ಉಪ ಯೋಗಿಸಿಕೊಳ್ಳುವನು ಸ್ವಾರ್ಥಿಯಾಗುತ್ತಾನೆ. ಲೋಭಿ ಪರರಿಗೂ ಕೊಡ, ತಾನೂ ಉಪಯೋಗಿಸ. ಉಂಡರೆ, ಉಟ್ಟರೆ ಐಶ್ವರ್ಯ ಸವೆಯುತ್ತದೆಂದು ಅವನು ದೇಹವನ್ನೇ ದಂಡಿಸುತ್ತಾನೆ. ಇದೂ ಒಂದು ಬಗೆಯ ಹಟ ಯೋಗವೇ. ಮಹಾಕವಿ ಷೇಕ್ಸ್‌ಪಿಯರ್ ತನ್ನ 'ಟಿಮನ್ ಆಫ್ ಅಥೆನ್ಸ್' ನಾಟಕದಲ್ಲಿಯೂ, ಶ್ರೇಷ್ಠ ನಾಟಕಕಾರ ಮಾಲಿಯರ್ ತನ್ನ 'ಜಿಪುಣ' ನಾಟಕದಲ್ಲಿಯೂ ಜಿಪುಣರನ್ನು ಅಮರಗೊಳಿಸಿದ್ದಾರೆ. ಕನ್ನಡ ಸಾಹಿತ್ಯ ದಲ್ಲಿ ಚಿನಿವಾರ ವ್ಯಾಪಾರಿಗಳಾಗಿದ್ದ ಪುರಂದರದಾಸರ ಜಿಪುಣತನ ಪ್ರಸಿದ್ಧವಾದುದಾಗಿದೆ.

ಒಂದು ಮಹಾಯೋಗಕ್ಕೆ ಸೇರಬೇಕಾದ ಈ ಗುಣವನ್ನು ಅರಿಷಡ್ವರ್ಗ ಗಳ ಗುಂಪಿಗೆ ಹಿರಿಯರು ಸೇರಿಸಿದ್ದಾರೆ. ಸರ್ವಜ್ಞನಿಗಂತೂ ಲೋಭಿಗಳನ್ನು ಕಂಡರೆ ಬೆಂಕಿ.

"ಎರೆಯಲೊಲ್ಲದ ಲೋಭಿ ಕರೆಯಲೊಲ್ಲದ ಆವು
ಬರೆಗಾಲು ಪಯಣ ಇವು ಮೂರು ತನ್ನ ತಾ-
ನಿರಿದುಕೊಂಡಂತೆ ಸರ್ವಜ್ಞ ||

ಕಂಡವರ ದಂಡಿಸುತ ಕೊಂಡವರ ಒಡವೆಗಳ
ನುಂಡುಂಡು ಮಲಗಿ ಮಡಿದಡೆ ಅವಗೆ ಯಮ-
ದಂಡ ತಪ್ಪುವದೆ ಸರ್ವಜ್ಞ ? ||

ಆರಿಗಾದರು ಒಂದು ತಾರವನು ಕೊಡಲೋಭಿ
ಮಾರಿಬಂದೆಳೆದು ಕೊಲುವಾಗ ಗಳಿಸಿದು-
ದಾರಿಗಾವುದು ? ಸರ್ವಜ್ಞ ||

ಕೊಟ್ಟ ಬಹಕಾಲದಲಿ ಕೊಟ್ಟುಣಲಿ ಕಲಿಯದೇ
ಹುಟ್ಟಿಯು ಒಳಗೆ ಜೇನಿಕ್ಕಿ ಪರರಿಂಗೆ
ಕೊಟ್ಟಹೋದಂತೆ ! ಸರ್ವಜ್ಞ ||

ಉಣ್ಣದೊಡವೆಯ ಗಳಿಸಿ ಮಣ್ಣಿನೊಳು ತಾನಿರಿಸಿ
ಸಣ್ಣಿಸಿ ನೆಲನ ಸಾರಿದನ ಬಾಯೊಳಗೆ
ಮಣ್ಣು ಕಾಣಯ್ಯ ! ಸರ್ವಜ್ಞ ||

ಜೀನತನಕ್ಕೆ ಮುಖ್ಯ ಕಾರಣ ನಾಳಿನ ಚಿಂತೆ. ನಾಳೆ ಕೈಕಾಲು ಮೆತ್ತಗಾದಾಗ ಏನು ಗತಿ ಎಂಬ ಚಿಂತೆ ಮನುಷ್ಯನನ್ನಾವರಿಸುತ್ತದೆ. ನಾಳಿಗೆ ಉಳಿಸುವುದರ ಸಲುವಾಗಿ ಇಂದೇ ಅವನು (ಅತಿ) ಮಿತವ್ಯಯ ವನ್ನಾರಂಭಿಸುತ್ತಾನೆ. ನಾಳೆ ಮೆತ್ತಗಾಗುವ ಕೈಕಾಲು ಇಂದೇ ಮೆತ್ತ ಗಾಗಲಾರಂಭಿಸುತ್ತದೆ. ಇಲ್ಲದವರಿಗಿಂತಲೂ ಇದ್ದವರಲ್ಲಿ ಜೀನತನ ಹೆಚ್ಚು. ಬಡವನ ಮನೆಗೆ ಭಿಕ್ಷಕ್ಕೆ ಹೋದರೆ ಒಂದು ತುಣುಕು ತಂಗಳು ರೊಟ್ಟಿ ಯಾದರೂ ಸಿಕ್ಕುತ್ತದೆ; ಶ್ರೀಮಂತನ ಮನೆಗೆ ಹೋದರೆ ನಾಯಿಗಳು ಕಾಲುಖಂಡವನ್ನು ಹರಿಯುತ್ತವೆ.

ಹಣವನ್ನೇ ಪರಮ ಸಾಧನವೆಂದು ಭಾವಿಸುವುದು ಜನರನ್ನು ಜೀನ ರನ್ನಾಗಿ ಮಾಡುತ್ತದೆ. ಮಾನವನ ಸೌಖ್ಯಕ್ಕೆ ಹಣವೊಂದು ಸಾಧನ ವೆಂದು ಭಾವಿಸದೆ ಅದನ್ನು ಸಂಗ್ರಹಿಸುವುದನ್ನೇ ಪರಮಗುರಿ ಮಾಡಿಕೊಂಡ

'ಜನ' ಜಿಪುಣಾಗ್ರೇಸರ ಚಕ್ರವರ್ತಿಗಳಾಗುತ್ತಾರೆ. ಕೆಲವರು ಮಂದಿಯನ್ನು ಊಟಕ್ಕೆ ಕರೆದು ಅರೆಹೊಟ್ಟೆ ಹಾಕಿ ಕಳಿಸುವುದುಂಟು. ಬಡಿಸಲು ಬಂದವರ ಕೈ ಹಿಡಿದು ಅತಿಥಿಯ ಆರೋಗ್ಯದ ಬಗ್ಗೆ ಮಾತನಾಡುತ್ತಾ ಅವನು ಹೆಚ್ಚು ತಿನ್ನದಂತೆ ಮಾಡುವುದುಂಟು. ಊಟಕ್ಕೆ ಕುಳಿತ ಅತಿಥಿಯ ಎದುರಿಗೆ ಬೇಗ ಊಟ ಮುಗಿಸಿ ಕುಳಿತು ಅವನ ಗಂಟಲನ್ನು ಹಿಡಿಯುವುದುಂಟು. ಹೆಂಡತಿ ಮಕ್ಕಳಿಗೂ ಉಣಲಿಡದೆ, ಬಟ್ಟೆಕೊಡದೆ ಕಾಸಿಗೆ ಕಾಸು ಗಂಟುಹಾಕುವುದುಂಟು. ಇಂಹವರಿಗೆ 'ಉಂಡದ್ದು ತನಗೆ ಬೈಚಿಟ್ಟದ್ದು ಪರರಿಗೆ' ಎಂದು ನಂಬುವ ದುಂದುಗಾರರನ್ನು ಕಂಡರೆ ಸ್ವಭಾವಜನ್ಯವಾದ ತಿರಸ್ಕಾರವಿರುವುದು ಸ್ವಾಭಾವಿಕ.

ಜಿಪುಣರು ಸಾಮಾನ್ಯವಾಗಿ ಇತರರನ್ನು ಜಿಪುಣರೆಂದು ಕರೆಯುವುದು ವಾಡಿಕೆ. ಇದರ ಕಾರಣ ಕಂಡವರು ತಮಗೆ ಕೊಡುವುದಿಲ್ಲವಲ್ಲ ಎಂಬ ಅತೃಪ್ತಿ, ಕಂಡವರನ್ನು ಜಿಪುಣರೆನ್ನುವುದರಿಂದ ತಾನು ಉದಾರಿ ಎಂದು ತೋರಿಸಿಕೊಂಡಂತಾಗುತ್ತದಲ್ಲಾ ಎಂಬ ಜಾಣತನ.

ಜಿಪುಣತನವನ್ನು ಸಾಧಿಸುವುದು ಅಷ್ಟು ಸುಲಭವಲ್ಲ. ಬೆಳಿಗ್ಗೆಯಿಂದ ಸಂಜೆಯವರೆಗೂ ಗೆಳೆಯರು ಹಣಬಿಚ್ಚುತ್ತಿದ್ದರೆ ಪರ್ಸಿಗೆ ಕೈಹಾಕದಿರುವುದು ಸುಲಭಸಾಧ್ಯವಲ್ಲ. ಕರೆದೆಡೆಗೆ ಹೋಗಿ ಆತಿಥೇಯರ ಕೈಯಿಂದಲೇ ಗಾಡಿ ಬಾಡಿಗೆ ಬಿಚ್ಚಿಸುವುದು ಒಂದು ಕಲೆ. ಇದನ್ನು ಸಾಧಿಸಬೇಕಾದರೆ ಬಹಳ ಶ್ರಮಪಡಬೇಕಾಗುತ್ತದೆ; ದೇಶಾವಾರದ ನಗೆ ಯಾವಾಗಲೂ ಮುಖಮಂಡಲದಲ್ಲಿ ರಾರಾಜಿಸುತ್ತಿರಬೇಕು, ತನ್ನ ಕಷ್ಟ ಇತರರ ಕರುಳಿರಿಯುವಂತೆ ಹೇಳಿಕೊಳ್ಳುವುದರಲ್ಲಿ ನೈಪುಣ್ಯ ದೊರಕಿಸಿಕೊಳ್ಳಬೇಕು.

ಇಷ್ಟೆಲ್ಲ ಪ್ರಯಾಸಪಟ್ಟು ಮನುಷ್ಯ ಸಾಧಿಸುವುದೇನು ?—'ಜಿಪುಣ' ಎಂಬ ಘನ ಬಿರುದು ! !

# ಅ. ನ. ಕೃಷ್ಣರಾಯರ ಗ್ರಂಥಗಳು

**ಕಥೆ**

- ಕಣ್ಣುಮುಚ್ಚಾಲೆ
- ಪಾಪ-ಪುಣ್ಯ
- ಕಾಮನ ಸೋಲು
- ಜಾತಿಹೀನನ ಮನೆಯ ಜ್ಯೋತಿ
- ಕಿಡಿ
- ಮಿಂಚು

**ಕಾದಂಬರಿ**

- ಜೀವನಯಾತ್ರೆ
- ಉದಯರಾಗ
- ಸಂಧ್ಯಾರಾಗ
- ಮಂಗಳಸೂತ್ರ
- ಸಾಹಿತ್ಯರತ್ನ
- ನಟಸಾರ್ವಭೌಮ

**ಹರಟೆ**

- ಪೊರಕೆ

**ಜೀವನಚರಿತ್ರೆ**

- ಬಸವಣ್ಣನವರ ಅಮೃತವಾಣಿ
- ಸ್ವಾಮಿ ವಿವೇಕಾನಂದ

**ಸಂಪಾದಿತ**

- ಮರುಳಸಿದ್ಧೇಶ್ವರ ಕಾವ್ಯ

**ಇತರ**

- ನನ್ನನ್ನು ನಾನೇ ಕಂಡೆ

**ಪ್ರಬಂಧ**

- ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ
- ಹೊಸ ಹುಟ್ಟು
- ರಾಜಾ ರವಿವರ್ಮ
- ಸಾಹಿತ್ಯ ಮತ್ತು ಜೀವನ
- ಕನ್ನಡದ ದಾರಿ
- ಅಖಂಡ ಕರ್ನಾಟಕ

**ನಾಟಕ**

- ಮದುವೆಯೋ-ಮನೆಹಾಳೋ
- ಆಹುತಿ
- ಆದದ್ದೇನು
- ಗೋಮುಖವ್ಯಾಘ್ರ
- ಎರಡು ನಾಟಕಗಳು
- ಬಣ್ಣದ ಬೀಸಣಿಗೆ
- ರಜಪೂತಲಕ್ಷ್ಮೀ

**ಸಂಕಲನ**

- ಪ್ರಣಯಗೀತಗಳು
- ರಸಋಷಿ
- ಕಾಮನಬಿಲ್ಲು
- ಭಾರತೀಯ ಕಥಾಸಾಹಿತ್ಯ
- ಪ್ರಗತಿಶೀಲ ಸಾಹಿತ್ಯ
- ಮ್ಯಾಕ್ಸಿಂ ಗಾರ್ಕಿ

**ಅಚ್ಚಿನಲ್ಲಿ**

ತಾಯಿಯ ಕರುಳು (ಕಾದಂಬರಿ)
ಯುಗಪುರುಷ ಲೆನಿನ್ (ಜೀವನ ಚರಿತ್ರೆ)
ಭಗವದ್ಗೀತಾರ್ಥಸಾರ (ಸಂಪಾದಿತ)

# ಕರ್ನಾಟಕ ಸಾಹಿತ್ಯ ಮಂದಿರ, ಧಾರವಾಡ

ಪ್ರಕಾಶಕರು ಮತ್ತು ಪುಸ್ತಕ ವ್ಯಾಪಾರಿಗಳು



## ನಮ್ಮ ಪ್ರಕಟನೆಗಳು

| | | | | |
|---|---|---|---|---|
| ವ್ಯಾಕ್ಸಿಂ ಗಾರ್ಕಿ | ಸಂ:—ಅ. ನ. ಕೃಷ್ಣರಾಯ | ೫ | ೮ | ೦ |
| ತಲೆಹರಟೆ | ನಾಡಿಗೇರ ಕೃಷ್ಣರಾಯ | ೧ | ೪ | ೦ |
| ಬಸವಣ್ಣನವರ ಅಮೃತವಾಣಿ | ಅ. ನ. ಕೃಷ್ಣರಾಯ | ೨ | ೪ | ೦ |
| ಪಾಪ–ಪುಣ್ಯ | ,, | ೧ | ೪ | ೦ |
| ಪ್ರಗತಿಶೀಲ ಸಾಹಿತ್ಯ | ಸಂ:— ,, | ೨ | ೦ | ೦ |
| ನನ್ನನ್ನು ನಾನೇ ಕಂಡೆ | ,, | ೧ | ೦ | ೦ |
| ಸಾಹಿತ್ಯ ಮತ್ತು ಜೀವನ | ,, | ೧ | ೮ | ೦ |
| ಎರಡು ನಾಟಕಗಳು | ,, | ೧ | ೧೨ | ೦ |
| ಸಂಧ್ಯಾರಾಗ (ತೃತೀಯ ಮುದ್ರಣ) | ,, | ೨ | ೦ | ೦ |
| ಅಶಾಂತಿಪರ್ವ | ಆನಂದಕಂದ (ದ್ವಿತೀಯ ಮುದ್ರಣ) | ೨ | ೪ | ೦ |
| ಲೀಲಾವತಿ ಪ್ರಬಂಧ | ಪ್ರೊ. ಕೆ. ಜಿ. ಕುಂದಣಗಾರ | ೦ | ೧೨ | ೦ |
| ನನ್ನ ನಲ್ಲ | ಮಧುರ ಚೆನ್ನ | ೦ | ೧೦ | ೦ |
| ಕರ್ನಾಟಕ ಗತವೈಭವ | ಆಲೂರ ವೆಂಕಟರಾಯರು | ೧ | ೧೨ | ೦ |
| ಕರ್ನಾಟಕ ವೀರರತ್ನಗಳು | ,, | ೧ | ೮ | ೦ |
| ಕಾಮನಬಿಲ್ಲು ಭಾಗ ೨ | ಸಂ:—ಅ. ನ. ಕೃಷ್ಣರಾಯ | ೨ | ೪ | ೦ |
| ಕಣ್ಣುಮುಚ್ಚಾಲೆ | ,, | ೧ | ೪ | ೦ |
| ಜೀವನ ಸಂಗ್ರಾಮ | ಅರ್ಚಿಕ ವೆಂಕಟೇಶ | ೧ | ೦ | ೦ |
| ರಸಋಷಿ | ಸಂ:—ಅ. ನ. ಕೃಷ್ಣರಾಯ | ೧ | ೮ | ೦ |
| ಕನ್ನಡದ ದಾರಿ | ,, | ೧ | ೮ | ೦ |
| ಅಖಂಡ ಕರ್ನಾಟಕ | ,, | ೧ | ೦ | ೦ |
| ರನ್ನಗನ್ನಡಿ | ನಾಡಿಗೇರ ಕೃಷ್ಣರಾಯ | ೧ | ೦ | ೦ |

## ಅ. ನ. ಕೃಷ್ಣರಾಯರ (ದೊರೆಯುವ) ಇತರ ಪುಸ್ತಕಗಳು

| | | | |
|---|---|---|---|
| ಸಾಹಿತ್ಯರತ್ನ | ೩ | ೮ | ೦ |
| ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ | ೨ | ೦ | ೦ |
| ಉದಯರಾಗ (ದ್ವಿತೀಯ ಮುದ್ರಣ) | ೧ | ೮ | ೦ |
| ರಾಜಾ ರವಿವರ್ಮ (ಸಚಿತ್ರ) | ೨ | ೦ | ೦ |
| ಹೊಸ ಹುಟ್ಟು | ೧ | ೦ | ೦ |
| ಆಹುತಿ | ೧ | ೦ | ೦ |
| ಸ್ವಾಮಿ ವಿವೇಕಾನಂದ | ೧ | ೪ | ೦ |
| ಮರುಳುಸಿದ್ಧ ಕಾವ್ಯ | ೩ | ೦ | ೦ |
| ಮಂಗಳಸೂತ್ರ (ದ್ವಿತೀಯ ಮುದ್ರಣ) | ೨ | ೪ | ೦ |

## ನಮ್ಮ ಏಜನ್ಸಿಯ ಇತರ ಪ್ರಕಟನೆಗಳು

| | | | | |
|---|---|---|---|---|
| ಅಭಿನವಕಾಳಿದಾಸ ಬಸವಪ್ಪಶಾಸ್ತ್ರಿ: | ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ | ೧ | ೪ | ೦ |
| ಸಂಧ್ಯಾಕಾಲ | ಶ್ರೀರಂಗ | ೧ | ೦ | ೦ |
| ಕುಂತಲೇಶ್ವರ | ಪಾಂ. ಭೀ. ದೇಶಾಯಿ | ೧ | ೦ | ೦ |
| ರತ್ನಸಿಂಹಾಸನ | ಮಾ. ನ. ಮೂರ್ತಿ | ೦ | ೧೨ | ೦ |
| ರಷ್ಯದ ಮುನ್ನಡೆ | ಕುಮಾರ ವೆಂಕಣ್ಣ | ೦ | ೮ | ೦ |
| ಶಿವನ ಸೋಲು | ಅಮರವಾಣಿ | ೦ | ೧೨ | ೦ |
| ಚಲೋ ದಿಲ್ಲಿ | ಅರ್ಚಿಕ ವೆಂಕಟೇಶ | ೧ | ೦ | ೦ |
| ಮುತ್ತಿನ ಚಿಪ್ಪು | ಕೆ. ನಾಗೇಶರಾಯ | ೧ | ೦ | ೦ |
| ಆತ್ಮಾರ್ಪಣ | ಕಾವ್ಯಾನಂದ | ೦ | ೮ | ೦ |
| ಭಾರತಶಕ್ತಿ | ಕುಮಾರ ವೆಂಕಣ್ಣ | ೦ | ೩ | ೦ |
| ಅಖಂಡೇಶ್ವರ ವಚನ: | ಶಿದ್ದವೀರದೇವರು | ೨ | ೦ | ೦ |
| ಕೈವಲ್ಯ ದರ್ಪಣ | ಪ್ರೊ. ಬಸವನಾಳ | ೧ | ೪ | ೦ |
| ಆಧುನಿಕ ಚೀನಾ | ಎಸ್. ಅನಂತನಾರಾಯಣ | ೧ | ೦ | ೦ |
| ಬ್ಯಾಂಕುಗಳೂ ಅವುಗಳ ವ್ಯವಹಾರಗಳು | ಅಡ್ಡಣಿಗಿ | ೧ | ೦ | ೦ |

**ಯಾವ ಕನ್ನಡ ಪುಸ್ತಕ ಬೇಕಾದರೂ ನಮಗೆ ಬರೆಯಿರಿ.**

# ಅ. ನ. ಕೃಷ್ಣರಾಯರ ಮೂರು ಪುಸ್ತಕಗಳು

(ಸದ್ಯದಲ್ಲೀ ಪ್ರಕಟವಾಗುತ್ತವೆ.)



೧. **ತಾಯಿಯ ಕರುಳು :**

ಕರುಣಾರಸಪ್ರಧಾನ ಕಾದಂಬರಿ.
ತಾಯ್ತನವನ್ನು ಹೊಸನೋಟದಲ್ಲಿ ನೋಡಲಾಗಿದೆ.
ಪುಟಗಳು: ಸುಮಾರು ೩೨೦

೨. **ಕರ್ನಾಟಕದ ಕಲಾವಿದರು :**

೧೬ ಜನ ಕನ್ನಡನಾಡಿನ ಚಿತ್ರಕಾರರು, ಸಂಗೀತಗಾರರು,
ಶಿಲ್ಪಿಗಳು ಇವರ ಸಮಗ್ರ ಪರಿಚಯ.
ಪುಟಗಳು: ಸುಮಾರು ೧೬೦.

೩. **ವೈಶಾಖ ಶುದ್ಧ ನವಮಿ :**

ಅ. ನ. ಕೃ.ಯವರ ಆತ್ಮಕಥೆ.
ಒಬ್ಬ ಜ್ಞಾನಭಿಕ್ಷುವಿನ ಸಾಧನೆಯ ಕಥೆ.
ಪುಟಗಳು: ಸುಮಾರು ೬೦೦.

